

# ಶ್ರೀಜಯತೀರ್ಥ ದರ್ಶನ

ಸಂಪಾದನೆ :

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)

**ಸಂಸ್ಥಾಪಕ-ನಿರ್ದೇಶಕರು : ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ**

''ಪಾಜಕ'', 89/24, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್, 3ನೇ ಮುಖ್ಯರಸ್ತೆ,

1ನೇ ಅಡ್ಡರಸ್ತೆ, ಹನುಮಂತನಗರ, ಬೆಂಗಳೂರು-19. ✆080-26602802, 26611011

Internet: www.vyasamadhwa.org E-mail: info@vyasamadhwa.org


## ಸಂಸ್ಥೆಯ ಪ್ರಮುಖ ಯೋಜನೆಗಳು

1) ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ 2000ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.

2) ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸ-ಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತೇಯಪ್ರಕಾಶನ); ಈಗಾಗಲೇ 30000 ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.

3) 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವಮೂಲ-ಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.

4) 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ 26 ವಿದ್ವಾಂಸರಿಗೆ ರೂ. 750/- ನ್ನು ಸಲ್ಲಿಸುತ್ತಿದ್ದು, ಅದನ್ನು ಮುಂದೆ ರೂ. 1000/-ಕ್ಕೆ ಹೆಚ್ಚಿಸುವ ಯೋಜನೆಯೂ ಇದೆ.

5) ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.

6) ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯ ವಿದ್ವಾಂಸರಿಗೆ ರೂ. 10,000/- ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.

7) ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.25,000/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.

8) ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.

9) ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ವಿಚಾರಸಂಕಿರಣಗಳನ್ನು, ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.15,000/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

**ವಿಶೇಷ ಸೂಚನೆ :**

1) ಪ್ರತಿಷ್ಠಾನಕ್ಕೆ ನೀಡುವ ಎಲ್ಲಾ ಬಗೆಯ ದೇಣಿಗೆಗಳಿಗೂ ಆದಾಯತೆರಿಗೆ ನಿಯಮ 80ಜಿ ಅನ್ವಯ ಆದಾಯತೆರಿಗೆ ವಿನಾಯಿತಿ ಸೌಲಭ್ಯ ಉಂಟು.

2) ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)", ಬೆಂಗಳೂರು - ಈ ಹೆಸರಿಗೆ ನಗದು/ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.




# ಶ್ರೀಜಯತೀರ್ಥದರ್ಶನ

(ಶ್ರೀಜಯತೀರ್ಥರ ಜೀವನಚರಿತ್ರೆ, ಅವರ ಕೃತಿಗಳ ಆದ್ಯಂತ-ಶ್ಲೋಕಗಳು, ಅವರನ್ನು ಕುರಿತ ಸ್ತೋತ್ರಗಳು ಇತ್ಯಾದಿ)

ಲೇಖಕರು :

**ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ**

ಪ್ರಕಾಶನ :

**ಐತರೇಯ ಪ್ರಕಾಶನ ವ್ಯಾಸನಕೆರೆ**

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,
ಹನುಮಂತನಗರ, ಬೆಂಗಳೂರು - ೫೬೦ ೦೧೯.

**Śrī Jayatīrtha-darśana** : by Vidyāvācaspati, Darśanaratnam, Pravacanācārya, Sacchāstra-vicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍita-ratnam, Vidyāvāridhi, Sacchāstra-pravacanapravīṇa, Gītāratnākara, Tattvavācaspati, Jnānaratnākara (and Recipient of Karnataka State Sanskrit Award-1999 & **Karnataka Rajyotsava Award-2002, Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005) Dr.Vyasanakere Prabhanjanacharya**, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere**, Publication wing of **Śrī VyāsaMadhva Samśodhana Pratiṣṭhāna** Pājakâ, No.89/24, Third Cross, Mount Joy Extension, Hanumanthanagar, Bangalore - 560019. Pages: 120 (4+116)

**SRI JAYATHIRTHA DARSHANA**
**ISBN NO. : 979-93-81826-03-4**

Phone : 26602802; 26611011.

Internet : www.vyasamadhwa.org

E-mail : info@vyasamadhwa.org



Fourth Revised Edition : 2012

Price : **Rs. 50 /-**

Typeset by :
**Śrī Vyāsa Madhva Samśodhana Pratiṣṭhāna**

Printed at :
**Vāgartha,** N.R. Colony, Bangalore- 560 019, Ph: 22427677

# ವಿಷಯಾನುಕ್ರಮಣಿಕೆ



*****

# ಮುನ್ನುಡಿ

ಶ್ರೀಜಯತೀರ್ಥರು ವಿಶ್ವಮಾನ್ಯರಾದ ಟೀಕಾಕಾರರು. ಶ್ರೀಮದಾನಂದತೀರ್ಥರ ಸರ್ವ-ಮೂಲಗ್ರಂಥಗಳ ಸ್ವಾರಸ್ಯದ ಸವಿಯನ್ನು ಅನುಪಮರೀತಿಯಲ್ಲಿ ಪ್ರಚುರಪಡಿಸಿದ ಮಹಾವಿದ್ವದ್ವಿಭೂತಿಗಳು. ಸಂಸ್ಕೃತವಾಙ್ಮಯರಾಶಿಯಲ್ಲೇ ಅವರ ಟೀಕಾಗ್ರಂಥಗಳಿಗೆ ಇರುವ ವೈಶಿಷ್ಟ್ಯ ಅತ್ಯುನ್ನತವಾದುದು. ಮೂಲಕಾರರ ಆಶಯವನ್ನು ಬಗೆ ಬಗೆಯಲ್ಲಿ ಆವಿಷ್ಕರಿಸುವ ಅವರ ಪ್ರತಿಭಾಪ್ರವಾಹವನ್ನು ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಘೂತ್ತಮರು, ಶ್ರೀರಾಘವೇಂದ್ರರು ಮೊದಲಾದ ಮಹಾವಿದ್ವಚ್ಛಿರೋಮಣಿಗಳು ತುಂಬುಹೃದಯದಿಂದ ಸ್ತುತಿಸಿರುವರು. ಇಡೀ ದ್ವೈತವೇದಾಂತದ ಪರಂಪರೆ ಅವರ ಟೀಕೆಗಳ ಮೂಲಕ ಶ್ರೀಮದಾ-ಚಾರ್ಯರ ಗ್ರಂಥಗಳ ಭಾವವನ್ನು ಅರಿಯುವುದೇ ಬಾಳಿನ ಸಾರ್ಥಕ್ಯ ಎಂದು ಭಾವಿಸಿ, ಬೆಳೆದುಬಂದಿದೆ. ಶ್ರೀವಿಜಯದಾಸರು, ಶ್ರೀಪ್ರಸನ್ನವೇಂಕಟದಾಸರು, ಶ್ರೀಜಗನ್ನಾಥದಾಸರು ಮೊದಲಾದ ಹರಿದಾಸರು ವಿಶಿಷ್ಟರೀತಿಯಲ್ಲಿ ತಮ್ಮ ಕೃತಿಗಳಲ್ಲಿ ಶ್ರೀಜಯತೀರ್ಥರ ಮಹಿಮೆಯನ್ನು ಸಾರಿರುವರು.

ಇಂತಹ ಶ್ರೀಜಯತೀರ್ಥರ ಹಿರಿಮೆಗರಿಮೆಗಳನ್ನು ತಿಳಿಸಲೆಂದು ಈ ಕೃತಿ ರಚಿತವಾಗಿದೆ. ಇದರಲ್ಲಿ ಮೂಲ ಆಕರಗಳಿಂದ ತಿಳಿದು ಬರುವ ಶ್ರೀಜಯತೀರ್ಥರ ಚರಿತ್ರೆಯನ್ನು ಸಂಗ್ರಹಿಸಿ ಕೊಡಲಾಗಿದೆ. ಅವರ ಗ್ರಂಥಗಳ ಆದ್ಯಂತಶ್ಲೋಕಗಳನ್ನೂ ಹಾಗೂ ಅವರ ಮೇಲೆ ರಚಿತವಾದ ಕೆಲವು ಸಂಸ್ಕೃತಸ್ತೋತ್ರಗಳನ್ನೂ ಪರಿಶಿಷ್ಟದಲ್ಲಿ ಕೊಡಲಾಗಿದೆ. ಅವರನ್ನು ಕುರಿತು ಅನಂತರದ ಗ್ರಂಥಕಾರರು ಮಾಡಿರುವ ಪ್ರಶಂಸಾಪರಶ್ಲೋಕಗಳನ್ನು **'ಶ್ರೀಜಯ-ತೀರ್ಥವೈಭವಮ್'** ಎಂಬ ಹೆಸರಿನಲ್ಲಿ ಸಂಗ್ರಹಿಸಿಕೊಡಲಾಗಿದೆ. ಅವರನ್ನು ಕುರಿತ ಪ್ರಮುಖ ಹರಿದಾಸರ ಕೃತಿಗಳನ್ನೂ ಅಳವಡಿಸಲಾಗಿದೆ. ಶ್ರೀಜಯತೀರ್ಥರನ್ನು ಕುರಿತ ಇನ್ನೂ ಅನೇಕ ಸ್ತೋತ್ರಗಳನ್ನು ನಮ್ಮ ಪ್ರಕಾಶನದ ಸ್ತೋತ್ರಮಾಲಿಕಾ ಭಾಗ-೧೦ರಲ್ಲಿ ಕಾಣಬಹುದು. ಅಂತು ಶ್ರೀಜಯತೀರ್ಥರ ಮಾಹಾತ್ಮ್ಯದರ್ಶನಕ್ಕೆ ಸಾಧ್ಯವಾದಷ್ಟು ಉಪಯುಕ್ತವಾಗುವಂತೆ ಈ ಕೃತಿಯು ಸಿದ್ಧವಾಗಿದೆ ಎಂಬ ವಿಶ್ವಾಸ ನಮ್ಮದು.

ಪ್ರಸ್ತುತ ಪ್ರಕಾಶನ ನಾಲ್ಕನೆಯ ಆವೃತ್ತಿ. ಶ್ರೀಹರಿದಾಸಭಕ್ತಿಸಂಗೀತದಿಂದ ಆಸ್ತಿಕವರ್ಗದಲ್ಲಿ ತುಂಬಾ ಜನಪ್ರಿಯರಾಗಿರುವ ಶ್ರೀ **ಮೈಸೂರು ರಾಮಚಂದ್ರಾಚಾರ್ಯರು**, ಈ ಬಾರಿ ಮಳಖೇಡಕ್ಷೇತ್ರದಲ್ಲಿ ಹಮ್ಮಿಕೊಂಡಿರುವ, ತುಂಬಾ ವಿಶಿಷ್ಟರೀತಿಯ **ಶ್ರೀಮಧ್ವ-ಪುರಂ-ದರೋತ್ಸವದ** ಶುಭಸಂದರ್ಭದಲ್ಲಿ ಭಕ್ತಜನತೆಗೆ ಕಾಣಿಕೆಯಾಗಿ ನೀಡಲೆಂಬ ಸಮುದ್ದೇಶದಿಂದ ಇದರ ಪ್ರಕಾಶನದ ಪ್ರಾಯೋಜಕತ್ವದಲ್ಲಿ ಪಾಲ್ಗೊಂಡಿರುವರು. ಇದರ ಡಿ.ಟಿ.ಪಿ. ಕಾರ್ಯ-ವನ್ನು ನಿರ್ವಹಿಸಿದವರು ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ. ಸಹಕಾರ ಚಿ.ಆನಂದಪದ್ಮನಾಭ, ಶ್ರೀಮತಿ ಶಶಿಕಲಾ ಹಾಗೂ ನನ್ನ ಪುತ್ರ ಚಿ. ಜಯಂತ ವ್ಯಾಸನಕೆರೆ ಅವರದು. ಸಕಾಲದಲ್ಲಿ ಮುದ್ರಣ ಮಾಡಿಕೊಟ್ಟವರು ಬೆಂಗಳೂರಿನ ವಾಗರ್ಥ ಅವರು. ಇವರೆಲ್ಲರಿಗೂ ನಮ್ಮ ಪ್ರತಿಷ್ಠಾನ ಋಣಿ.

ಶ್ರೀಮಧ್ವ-ಪುರಂದರೋತ್ಸವ,
ಮಳಖೇಡಕ್ಷೇತ್ರ, ೨೨-೦೧-೨೦೧೨.

ವ್ಯಾಸನಕೆರೆ ಪ್ರಭಂಜನಾಚಾರ್ಯ

॥ ಶ್ರೀಃ ॥

# ಶ್ರೀ ಜಯತೀರ್ಥದರ್ಶನ

## ಸವ್ಯಸಾಚಿ ಶ್ರೀಜಯತೀರ್ಥರು

ಶ್ರೀಜಯತೀರ್ಥರು(೧೩೬೭-೧೩೮೮) ವೈಷ್ಣವವೇದಾಂತದ ಇತಿಹಾಸದಲ್ಲಿ ಅತ್ಯಂತ ಮಹತ್ತ್ವಪೂರ್ಣಸ್ಥಾನ ಗಳಿಸಿದ ಮಹನೀಯರು. ವೈಷ್ಣವಮುನಿತ್ರಯರಲ್ಲಿ ಎರಡನೆಯವರು[1] ಎಂಬುದು ಅವರ ಹಿರಿಮೆ. ಸವ್ಯಸಾಚಿಪಾಂಡಿತ್ಯ, ಅತ್ಯಪೂರ್ವ ವಾಕ್ಪಟುತ್ವ, ಅಪ್ರತಿಮ-ವಾದಕೌಶಲ, ಅನುಪಮಗ್ರಂಥರಚನಾಪಾಟವ, ಅಸಾಧಾರಣ ತಪಃಸಿದ್ಧಿ ಮೊದಲಾದ ವಿಶಿಷ್ಟಗುಣಗಳಿಂದಾಗಿ ಅಜರಾಮರರೆನ್ನಿಸಿರುವ ಯೋಗೀಶ್ವರರು ಅವರು. ವ್ಯಾಖ್ಯಾನ-ಕೌಶಲದಲ್ಲಂತೂ ಅವರಿಗೆ ಅವರೇ ಸಾಟಿ. ಅರ್ಜುನನ ಸವ್ಯಸಾಚಿ ಶಸ್ತ್ರಕೌಶಲವನ್ನು ಜ್ಞಾಪಿಸುವ ಅವರ ಶಾಸ್ತ್ರಕೌಶಲ ವಿದ್ವತ್ಪ್ರಪಂಚದ ದೊಡ್ಡ ಪವಾಡ. ಇಡೀ ಪರಂಪರೆಯಲ್ಲಿ ಟೀಕಾ-ಕೃತ್ಪಾದರೆಂದೇ ಮಾನ್ಯರಾದ ಅನುಪಮವೈಭವ ಅವರದು. ದ್ವೈತವಾಙ್ಮಯದ ಬಹುಭಾಗ ಅವರ ಗ್ರಂಥಗಳ ಟಿಪ್ಪಣೀರೂಪವಾಗಿದೆ ಎಂಬುದು ಅವರ ಹಿರಿಮೆ. ಅವರ ವಾಙ್ಮಯತಪಸ್ಸು ಆಚಾರ್ಯ ಶ್ರೀಮಧ್ವ(೧೨೦೦-೧೨೮೦)ರ ಸರ್ವಮೂಲಗ್ರಂಥಗಳ ಭಾವವನ್ನು ಆವಿಷ್ಕರಿಸಿದ ಪರಿ ವಿಶ್ವದ ಮಹಾದ್ಭುತಗಳಲ್ಲೊಂದು. ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಘೂತ್ತಮರು ಹಾಗೂ ಶ್ರೀರಾಘವೇಂದ್ರರಂತಹ ವಿದ್ವದ್ವಿಭೂತಿಗಳು ಇವರನ್ನು ಕೊಂಡಾಡಿರುವ ರೀತಿ ಅನ್ಯಾದೃಶ. ಶ್ರೀಮದಾಚಾರ್ಯರು ಸರ್ವಜ್ಞರೆಂದು ಪ್ರಸಿದ್ಧರಾಗಿದ್ದರೆ, ಶ್ರೀಜಯತೀರ್ಥರು ಸರ್ವಜ್ಞಕಲ್ಪರೆಂದು ಪ್ರಸಿದ್ಧರಾಗಿರುವರು. ಶ್ರೀಮದಾಚಾರ್ಯರ ಮಾತಿಗಿರುವ ಮಾನ್ಯತೆಯೇ ಇವರ ಮಾತಿಗೂ ಲಭಿಸಿದೆ ಎಂಬುದು ಇವರ ಅಸಾಮಾನ್ಯಸಿದ್ಧಿ.

## ಚರಿತ್ರೆಯ ಆಕರಗ್ರಂಥಗಳು

ಶ್ರೀಜಯತೀರ್ಥಶ್ರೀಚರಣರ ಚರಿತ್ರೆಯನ್ನು ಸಾಕಷ್ಟು ಅಧಿಕೃತವಾಗಿ ತಿಳಿಯಲು ಅನೇಕ ಗ್ರಂಥಗಳು ಉಪಲಬ್ಧವಿದ್ದು, ಅವುಗಳಲ್ಲಿ ಮುಖ್ಯವಾದ ಕೆಲವು ಹೀಗಿವೆ :-

### ೧. ಜಯತೀರ್ಥವಿಜಯ

ಇದು ಶ್ರೀಜಯತೀರ್ಥರ ಸಾಕ್ಷಾಚ್ಛಿಷ್ಯರಾದ ಶ್ರೀವ್ಯಾಸತೀರ್ಥರ ರಚನೆ. ಬೃಹಜ್ಜಯತೀರ್ಥ-ವಿಜಯ ಎಂಬುದಾಗಿ ಪ್ರಸಿದ್ಧವಾಗಿರುವ ಇದು ಒಟ್ಟು ಐದು ಸರ್ಗಗಳಲ್ಲಿ ೨೦೦ ಶ್ಲೋಕಗಳಲ್ಲಿ ಉಪಲಬ್ಧವಿದೆ. ಐದನೆಯ ಸರ್ಗದಲ್ಲಿ ಹನ್ನೊಂದು ಶ್ಲೋಕಗಳು ಮಾತ್ರ ಇದ್ದು ಶ್ರೀಜಯ-ತೀರ್ಥರು ಶ್ರೀದುರ್ಗಾದೇವಿಯ ಅನುಗ್ರಹಪ್ರಸಾದವಾಗಿ ಘಂಟಾ ಹಾಗೂ ಪೂಗಫಲವನ್ನು

---

೧. ಶ್ರೀಮಧ್ವಃ ಕಲ್ಪವೃಕ್ಷಸ್ತು ಜಯಾರ್ಯಃ ಕಾಮಧುಕ್ ಸ್ಮೃತಃ ।
ಚಿಂತಾಮಣಿಸ್ತು ವ್ಯಾಸಾರ್ಯಃ ಮುನಿತ್ರಯಮುದಾಹೃತಮ್ ॥ – ಶ್ರೀಮುಷ್ಣಮಾಹಾತ್ಮ್ಯಮ್

ಪಡೆಯುವವರೆಗೆ ಮಾತ್ರ ವಿಷಯವು ನಿರೂಪಿತವಾಗಿರುವುದರಿಂದ ಇದು ಅಪೂರ್ಣವಾಗಿದೆ ಎಂಬುದು ಸ್ಪಷ್ಟ. ಇದು ಮೈಸೂರಿನ ಶ್ರೀಜಯಾಲಯ ಮುದ್ರಣಾಲಯದಿಂದ ಪ್ರಕಾಶಿತ-ವಾಗಿದೆ(ಕ್ರಿ.ಶ.೧೯೧೪). ಗ್ರಂಥ ಪೂರ್ಣ ದೊರೆತಲ್ಲಿ ಶ್ರೀಜಯತೀರ್ಥರ ಜೀವನದ ಬಗ್ಗೆ ಅನೇಕ ಅಪೂರ್ವ ವಿವರಗಳು ದೊರೆಯಲು ಸಾಧ್ಯ.

### ೨. ಅಣುಜಯತೀರ್ಥವಿಜಯ

ಇದು ಸಹ ಶ್ರೀಜಯತೀರ್ಥರ ಸಾಕ್ಷಾಚ್ಛಿಷ್ಯರಾದ ಶ್ರೀವ್ಯಾಸತೀರ್ಥರ ರಚನೆ ಎಂದೇ ಪ್ರಸಿದ್ಧಿ. ಒಟ್ಟು ೩೪ ಸ್ರಗ್ಧರಾ ಶ್ಲೋಕಗಳಲ್ಲಿ ಶ್ರೀಜಯತೀರ್ಥರ ಜೀವನ, ಸಾಧನೆಗಳನ್ನು ತುಂಬಾ ಪರಿಣಾಮಕಾರಿಯಾಗಿ ನಿರೂಪಿಸುವ ಅಪೂರ್ವಕೃತಿ. ಜಯಾರ್ಯಸ್ತೋತ್ರವಾಗಿರುವ ಇದು ಅಣುಜಯತೀರ್ಥವಿಜಯವೆಂದೇ ಪ್ರಸಿದ್ಧವಾಗಿದ್ದು ಜಯತೀರ್ಥವಿಜಯದ ಸಂಗ್ರಹ-ರೂಪಕೃತಿಯಂತಿದೆ. ವಾದೀಂದ್ರನೆಂಬ ಒಬ್ಬ ವಾದಿಯನ್ನು ಶ್ರೀಜಯತೀರ್ಥರು ಪರಾಭವ-ಗೊಳಿಸಿದ ವಿಶೇಷವಿವರ ಇದರಲ್ಲಿದೆ.

### ೩. ಜಯತೀರ್ಥವಿಜಯ

ಇದು ಸುಮಧ್ವವಿಜಯ ಹಾಗೂ ತಂತ್ರಸಾರಸಂಗ್ರಹಗಳಿಗೆ ಉಪಯುಕ್ತ ಟೀಕೆಯನ್ನು ರಚಿಸಿರುವ ಶ್ರೀಛಲಾರಿಶೇಷಾಚಾರ್ಯರ ಪುತ್ರರಾದ ಶ್ರೀಸಂಕರ್ಷಣಾಚಾರ್ಯರ ಕೃತಿ. ಒಟ್ಟು ಐದುಸರ್ಗಗಳಲ್ಲಿ ೨೩೯ ಶ್ಲೋಕಗಳಲ್ಲಿ ಶ್ರೀಜಯತೀರ್ಥರ ಬಗ್ಗೆ ಅನೇಕ ವಿವರಗಳನ್ನು ಒದಗಿಸುವ ಈ ಕೃತಿಯು ಅವರೇ ರಚಿಸಿರುವ ವ್ಯಾಖ್ಯಾನದೊಂದಿಗೆ ನನ್ನ ಸಂಗ್ರಹದಲ್ಲಿ ಉಪಲಬ್ಧವಿದೆ[೨].

### ೪. ಜಯೀಂದ್ರೋದಯ

ಇದು ಶ್ರೀಅಶ್ವತ್ಥನಾರಾಯಣಾಚಾರ್ಯರೆಂಬವರ ಶಿಷ್ಯರಾದ ಕರಿಕೇಹಳ್ಳಿ ಶ್ರೀನಿವಾಸಾ-ಚಾರ್ಯರಿಂದ ರಚಿತವಾದ ಆರು ಸರ್ಗಗಳ ಕೃತಿ. ಒಟ್ಟು ೩೯೦ ಶ್ಲೋಕಗಳಲ್ಲಿ ಶ್ರೀಜಯ-ತೀರ್ಥರ ಜೀವನದ ಬಗ್ಗೆ ಅನೇಕ ವಿವರಗಳು ಇದರಲ್ಲಿ ನಿರೂಪಿತವಾಗಿದೆ. ಶ್ರೀಜಯತೀರ್ಥರ ಸಂಚಾರದ ಬಗ್ಗೆ ವಿಶೇಷ ಬೆಳಕು ಚೆಲ್ಲುವುದು ಈ ಕೃತಿಯ ವೈಶಿಷ್ಟ್ಯ[೨].

### ೫. ಜಯತೀರ್ಥವಿಜಯಾಬ್ಧಿ

ಇದು ಶ್ರೀಸತ್ಯಧರ್ಮತೀರ್ಥರ ಶಿಷ್ಯವರ್ಗಕ್ಕೆ ಸೇರಿದ ಶ್ರೀಕೃಷ್ಣಾಚಾರ್ಯರಿಂದ ರಚಿತವಾದ ಕೃತಿ. ಕ್ರಮವಾಗಿ ವೈರಾಗ್ಯ, ಭಕ್ತಿ, ಜ್ಞಾನ ಮತ್ತು ಫಲ ಎಂಬ ಹೆಸರುಗಳುಳ್ಳ ನಾಲ್ಕು ತರಂಗಗಳ

---

೧. ಬೆಂಗಳೂರಿನ ದ್ವೈತವೇದಾಂತ ಅಧ್ಯಯನ ಸಂಸ್ಥೆಯಿಂದ ನನ್ನ ಸಂಪಾದಕತ್ವದಲ್ಲಿ ಪ್ರಕಾಶಿತವಾಗಿದೆ (೧೯೯೪).

೨. ಇದರ ಹಸ್ತಪ್ರತಿ ನನ್ನ ಸಂಗ್ರಹದಲ್ಲಿದೆ (ಶ್ರೀಜಯತೀರ್ಥ ಸಂಸ್ಕೃತಹಸ್ತಪ್ರತಿಗ್ರಂಥಾಲಯ, ವ್ಯಾಸನಕೆರೆ).

೧೪೬ ಶ್ಲೋಕಗಳಲ್ಲಿ ರಚಿತವಾಗಿರುವ ಕೃತಿ. ಇದರಲ್ಲಿ ಶ್ರೀಜಯತೀರ್ಥರ ಪ್ರವಚನವೈಖರಿ ವಿಶೇಷವಾಗಿ ವರ್ಣಿತವಾಗಿದೆ. ಇದು ಇನ್ನೂ ಪ್ರಕಾಶಿತವಾಗಿಲ್ಲ[೧].

### ೬. ಜಯತೀರ್ಥಗುಣಾರ್ಣವ

ಇದು ಕೊಲ್ಲಾಪುರ ಆರ್ಕಾಡ್ ನರಸಿಂಹಾಚಾರ್ಯ ಎಂಬವರಿಂದ ರಚಿತವಾಗಿದ್ದು ಇದರಲ್ಲಿ ಒಟ್ಟು ಐದು ಸರ್ಗಗಳಿದ್ದು ಒಟ್ಟು ೨೮೩ ಶ್ಲೋಕಗಳಿವೆ. ಇದು ಇನ್ನೂ ಪ್ರಕಾಶಿತವಾಗಿಲ್ಲ. ಇದರ ಹಸ್ತಪ್ರತಿ ನನ್ನ ಸಂಗ್ರಹದಲ್ಲಿದೆ[೨].

### ೭. ಜಯತೀರ್ಥವಿಜಯ

ಇದು ಶ್ರೀಕೂಡ್ಲಿಆರ್ಯಅಕ್ಷೋಭ್ಯತೀರ್ಥಮಠದ ಪೀಠಾಧೀಶರಾಗಿದ್ದ ಶ್ರೀರಘುದಾಂತ-ತೀರ್ಥಶ್ರೀಪಾದರಿಂದ ರಚಿತವಾದ ಒಟ್ಟು ೫೬ ಶ್ಲೋಕಗಳ ಕೃತಿ[೩].

### ೮. ಶ್ರೀಜಯತೀರ್ಥಗುಣರತ್ನಮಾಲಾ

ಶ್ರೀರಘುಶಾಂತದಾಸ ಎಂಬವರಿಂದ ರಚಿತವಾದ ಈ ಕೃತಿಯಲ್ಲಿ ಮೂರು ಸರ್ಗಗಳಿದ್ದು ಒಟ್ಟು ೨೧೫ ಶ್ಲೋಕಗಳನ್ನು ಒಳಗೊಂಡಿದೆ; ಇದು ಈಗಾಗಲೇ ಪ್ರಕಟವಾಗಿದೆ[೪]. .

ಇವುಗಳಲ್ಲದೆ ಗುರುಚರ್ಯಾ, ಪೂರ್ಣಬೋಧಗುರುವಂಶಕಥಾಕಲ್ಪತರು, ಗುರು-ಮಾಹಾತ್ಮ್ಯರತ್ನಾವಲಿ, ಮೊದಲಾದ ಗುರುಪರಂಪರಾನಿರೂಪಕ ಅನೇಕ ಪ್ರಾಚೀನ ಕೃತಿಗಳಲ್ಲೂ ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀವಿಜಯದಾಸರು, ಶ್ರೀಜಗನ್ನಾಥದಾಸರು ಮೊದ-ಲಾದ ಹರಿದಾಸರ ಅನೇಕಕೃತಿಗಳಲ್ಲೂ ಇವರ ಬಗ್ಗೆ ಅನೇಕ ವಿವರಗಳು ದೊರೆಯುತ್ತವೆ. ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಘೂತ್ತಮತೀರ್ಥರು, ಶ್ರೀರಾಘವೇಂದ್ರರು, ಶ್ರೀಯಾದವಾರ್ಯರು ಮೊದಲಾದ ಅನಂತರದ ಎಲ್ಲಾ ಪ್ರಮುಖಗ್ರಂಥಕಾರರ ಕೃತಿಗಳಲ್ಲೂ ಶ್ರೀ ಜಯತೀರ್ಥರ ಸ್ತುತಿ ತಪ್ಪದೆ [೫]ಕಾಣಸಿಗುತ್ತದೆ. ಅಲ್ಲದೆ ಬಿದರಹಳ್ಳಿಶ್ರೀನಿವಾಸತೀರ್ಥರು,

---

೧. ಇದರ ಹಸ್ತಪ್ರತಿಯು ಮೈಸೂರು ಓರಿಯೆಂಟಲ್ ಲೈಬ್ರರಿಯಲ್ಲೂ ನನ್ನ ಸಂಗ್ರಹದಲ್ಲೂ ಉಪಲಬ್ಧವಿದೆ.

೨. ಹೊಸಪೇಟೆಯ ಶ್ರೀಸತ್ಯಪ್ರಮೋದತೀರ್ಥ ಗ್ರಂಥಭಂಡಾರದಲ್ಲೂ ಇದರ ಪ್ರತಿಯೊಂದು ಕಂಡುಬಂದಿದೆ.

೩. ಇದು ಮೊದಲಿಗೆ ಆಲೂರು ಜಹಗೀರ್‌ದಾರ್ ರಾಘವೇಂದ್ರಾರ್ಯಶರ್ಮಾ ಎಂಬವರಿಂದ ಬಾಗಲ-ಕೋಟೆಯಿಂದ ಪ್ರಕಾಶಿತವಾಗಿತ್ತು. ಇದನ್ನು ನಮ್ಮ ಪ್ರಕಾಶನದ ಶ್ರೀಜಯತೀರ್ಥಸ್ತೋತ್ರಮಂಜರಿಯಲ್ಲಿ (೧೯೯೮) ಸಹ ಸಮಗ್ರ ಕೊಡಲಾಗಿದೆ.

೪. ನಮ್ಮ ಪ್ರಕಾಶನದ ಸ್ತೋತ್ರಮಾಲಿಕಾ ಭಾಗ -೧೦ರಲ್ಲೂ ಸಮಗ್ರವಾಗಿ ಕೊಡಲಾಗಿದೆ

೫. ಶ್ರೀಜಯತೀರ್ಥರನ್ನು ಕುರಿತ ಅಂತಹ ಸ್ತೋತ್ರಗಳನ್ನು ಹಾಗೂ ಪ್ರಾಚೀನಗ್ರಂಥಗಳಲ್ಲಿನ ಶ್ರೀಜಯ-ತೀರ್ಥಸ್ತುತಿಪರಶ್ಲೋಕಗಳನ್ನು ನಮ್ಮ ಪ್ರಕಾಶನದ ಶ್ರೀಜಯತೀರ್ಥಸ್ತೋತ್ರಮಂಜರಿಯಲ್ಲೂ

ಗುರುಜಾಲಕೃಷ್ಣಾಚಾರ್ಯರು, ಬಿದರಹಳ್ಳಿವೆಂಕಟಪತ್ಯಾಚಾರ್ಯರು, ಶ್ರೀಸತ್ಯಪ್ರಿಯತೀರ್ಥರು, ವೈಶ್ವನಾಥಿನಾರಾಯಣಪಂಡಿತಾಚಾರ್ಯರು, ಜಯವೇಂಕಟಾಚಾರ್ಯರು ಮೊದಲಾದ ಅನೇಕ ಮಹನೀಯರು ರಚಿಸಿರುವ ಇಪ್ಪತ್ತಕ್ಕೂ ಹೆಚ್ಚಿನ ಶ್ರೀಜಯತೀರ್ಥಸ್ತೋತ್ರರೂಪಕೃತಿಗಳೂ ಉಪಲಬ್ಧವಿವೆ. ಇವುಗಳಲ್ಲದೆ 'ತೊರವೆ ನರಹರಿ' ಅಂಕಿತದ 'ಜಯತೀರ್ಥವಿಜಯ' ಎಂಬ ನಾಲ್ಕು ಅಧ್ಯಾಯಗಳ ಒಂದು ಕನ್ನಡ ಪದ್ಯಕಾವ್ಯವೂ ಉಂಟು (ಪ್ರಕಟಿತ).

ಶ್ರೀರಾಘವೇಂದ್ರವಿಜಯ, ಶ್ರೀಸತ್ಯನಿಧಿವಿಲಾಸ ಮೊದಲಾದ ಇತರ ಅನೇಕ ಕೃತಿಗಳಲ್ಲೂ ಶ್ರೀಜಯತೀರ್ಥರ ಬಗ್ಗೆ ವಿವರಗಳು ದೊರೆಯುತ್ತವೆ.

## ಶ್ರೀಮಧ್ವದರ್ಶನ

ತತ್ತ್ವಜಿಜ್ಞಾಸುಗಳಿಗೆ ಮಾರ್ಗದರ್ಶನ ನೀಡಲೆಂದು ದರ್ಶನಗಳ ಪ್ರವಾಹವೇ ಹರಿದುಬಂದಿರುವುದನ್ನು ಜಾಗತಿಕ ಇತಿಹಾಸ ದಾಖಲಿಸಿದೆ. ಅಂತಹ ದರ್ಶನಗಳಲ್ಲಿ ವೈದಿಕ ಹಾಗೂ ಅವೈದಿಕ ಎಂಬುದು ಮುಖ್ಯ ಪ್ರಭೇದ. ಬಹುತೇಕ ದರ್ಶನಗಳು ಮಾರ್ಗದರ್ಶನ ನೀಡುವ ಬದಲು ಸಾಮಾನ್ಯಜೀವನಾದರ್ಶಗಳಿಗೂ ತಿಲಾಂಜಲಿಯನ್ನೀಯುವ ದುರ್ಮತಗಳೇ ಆದದ್ದು ದೊಡ್ಡ ವಿಪರ್ಯಾಸ. ಅವೈದಿಕದರ್ಶನಗಳಂತೆ ವೈದಿಕದರ್ಶನಗಳು ಸಹ ತತ್ತ್ವಜಿಜ್ಞಾಸೆಯನ್ನು ಪೂರೈಸಲು ವಿಫಲಗೊಂಡವು; ಅದಕ್ಕೆ ಅವು ವೇದಗಳ ಅಂತರಾರ್ಥವನ್ನು ಗ್ರಹಿಸದೆ, ಹೊರನೋಟದ ಅರ್ಥವನ್ನೇ ಪ್ರಧಾನ ಎಂದು ಭಾವಿಸಿದ್ದು ಮುಖ್ಯಕಾರಣವಾಯಿತು. ವೇದ ಒಪ್ಪಿದ ಅದ್ವೈತ ಗುಣಪೂರ್ಣನಾದ ದೇವನನ್ನು ಒಪ್ಪಲಿಲ್ಲ; ಅವನ ಅದ್ಭುತನಿರ್ಮಾಣವಾದ ಜಗತ್ತನ್ನೂ ಒಪ್ಪಲಿಲ್ಲ. ಎಂದರೆ ಸಾಧನರಂಗವಾದ ಜಗತ್ತನ್ನಾಗಲೀ, ಸಿದ್ಧಿಯ ಪಾರಮ್ಯವಾದ ಭಗವತ್ತತ್ತ್ವವನ್ನಾಗಲೀ ಅದು ನಿಜವಾದ ಅರ್ಥದಲ್ಲಿ ಒಪ್ಪಲೇ ಇಲ್ಲ. ಅನಂತರದ ವಿಶಿಷ್ಟಾದ್ವೈತದರ್ಶನವು ದೇವರು ಹಾಗೂ ಜಗತ್ತುಗಳನ್ನು ಒಪ್ಪಿದರೂ, ಮೋಕ್ಷದಲ್ಲಿ ಆನಂದತಾರತಮ್ಯವನ್ನು ನಿರಾಕರಿಸುವ ಮೂಲಕ ದೇವರ ಪರಮಪಾರಮ್ಯವನ್ನು ಕೈಬಿಟ್ಟಿತು. ಮೋಕ್ಷ ಕೊಡುವ ಭಗವಂತನನ್ನು ಒಪ್ಪಿದರೂ, ಮೋಕ್ಷಕೊಡಿಸುವ ಪ್ರಾಣತತ್ತ್ವವನ್ನು ಗೌಣವನ್ನಾಗಿಸಿದ್ದು ಅದರ ಮತ್ತೊಂದು ಪ್ರಬಲ ಲೋಪವಾಯಿತು. ಹೀಗೆ ತತ್ತ್ವಜಿಜ್ಞಾಸುಗಳ ಪಾಲಿಗೆ ನಿಜವಾದ ದರ್ಶನ ಗಗನಕುಸುಮವಾಗಿಯೇ ಉಳಿದಿತ್ತು.

ಇಂತಹ ವಿಶಿಷ್ಟ ಸನ್ನಿವೇಶದಲ್ಲಿ ಶ್ರೀಮಧ್ವದರ್ಶನದ ಉದಯವಾಯಿತು. ಸಕಲಶ್ರುತಿಸ್ಮೃತಿಗಳ ಹಿನ್ನೆಲೆಯಲ್ಲಿ ಆವಿಷ್ಕೃತವಾದಂತಹ ಶ್ರೀವ್ಯಾಸದರ್ಶನದ ಯಥಾರ್ಥಸ್ವರೂಪ ಜನತೆಗೆ ತಿಳಿದು ಆಸ್ತಿಕರ ಜಿಜ್ಞಾಸೆ ತಣಿಯಿತು. ಶ್ರೀಮಧ್ವರ ಜೀವನ ಹಾಗೂ ಕೃತಿಗಳು ವೇದ, ಇತಿಹಾಸ, ಪುರಾಣಾದಿಗಳ ಹೃದಯವನ್ನು ತೆರೆದು ತೋರಿಸಿದವು. ಅವರ ಶಿಷ್ಯವರ್ಗದಲ್ಲಿ

---

ಸ್ತೋತ್ರಮಾಲಿಕಾ ಭಾಗ-೧೦ರಲ್ಲೂ ಶ್ರೀಜಯತೀರ್ಥಪ್ರಶಸ್ತಿ ಎಂಬ ಹೆಸರಿನಲ್ಲಿ ಸಂಗ್ರಹಿಸಿ ಕೊಡಲಾಗಿದೆ; ಇದರ ಪರಿಶಿಷ್ಟದಲ್ಲೂ ಅವುಗಳನ್ನು ಕಾಣಬಹುದು.

ಶ್ರೀಪದ್ಮನಾಭತೀರ್ಥರು ಘಟ್ಟದ ಮೇಲಿನ ಸಮಸ್ತ ವೈಷ್ಣವವೃಂದಕ್ಕೆ ಗುರುಗಳೆನ್ನಿಸಿ ಮಾನ್ಯರಾದರೆ, ಶ್ರೀಹೃಷೀಕೇಶತೀರ್ಥರು ಮೊದಲಾದ ಇತರ ಎಂಟು ಜನ ಪ್ರಧಾನಶಿಷ್ಯರು ಉಡುಪಿಯ ಅಷ್ಟಮಠಗಳಿಗೆ ಅಧಿಪತಿಗಳೆನ್ನಿಸಿದರು. ಹೀಗೆ ಆಚಾರ್ಯ ಶ್ರೀಮಧ್ವರಿಂದ ಪ್ರವರ್ತಿತವಾದ ದ್ವೈತದರ್ಶನ ಎಲ್ಲೆಡೆ ಪ್ರಸಾರಗೊಳ್ಳತೊಡಗಿತು.

ಶ್ರೀಪದ್ಮನಾಭತೀರ್ಥರ ಅನಂತರ ಸ್ವತಃ ಶ್ರೀಮದಾಚಾರ್ಯರ ಆದೇಶದಂತೆ ಶ್ರೀನರ-ಹರಿತೀರ್ಥರು, ಶ್ರೀಮಾಧವತೀರ್ಥರು ಹಾಗೂ ಶ್ರೀಅಕ್ಷೋಭ್ಯತೀರ್ಥರು ಕ್ರಮವಾಗಿ ಆ ಪೀಠವನ್ನು ಅಲಂಕರಿಸಿದರು. ಶ್ರೀನರಹರಿತೀರ್ಥರೂ ಸಹ ಶ್ರೀಮದಾಚಾರ್ಯರ ಸಾಕ್ಷಾ-ಚ್ಛಿಷ್ಯರೇ ಆಗಿದ್ದವರು. ಶ್ರೀಮಾಧವತೀರ್ಥರು ಹಾಗೂ ಶ್ರೀಅಕ್ಷೋಭ್ಯತೀರ್ಥರೂ ಸಹ ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರೇ ಆಗಿದ್ದವರು ಎಂದೇ ಪ್ರತೀತಿ ಉಂಟು. ಆದರೆ ಈ ಮೂವರ ವಿಶೇಷ ಶಾಸ್ತ್ರಾಧ್ಯಯನ ಶ್ರೀಪದ್ಮನಾಭತೀರ್ಥರಲ್ಲಿ ನಡೆಯಿತು ಎಂಬುದಾಗಿ [೧]ಶ್ರೀರಘೂತ್ತಮತೀರ್ಥರು ಉಲ್ಲೇಖಿಸಿರುವರು.

ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರಲ್ಲಿ ಶ್ರೀವಿಷ್ಣುತೀರ್ಥರು, ಶ್ರೀಪದ್ಮನಾಭತೀರ್ಥರು, ಶ್ರೀಹೃಷೀಕೇಶತೀರ್ಥರು, ಶ್ರೀಸತ್ಯತೀರ್ಥರು ಹಾಗೂ ಶ್ರೀನರಿಹರಿತೀರ್ಥರು ಅನೇಕ ಕೃತಿಗಳನ್ನು ರಚಿಸಿರುವರು; ಶ್ರೀತ್ರಿವಿಕ್ರಮಪಂಡಿತಾರ್ಯರು ಹಾಗೂ ಅವರ ಪುತ್ರರಾದ ಶ್ರೀನಾರಾಯಣಪಂಡಿ-ತಾಚಾರ್ಯರು ಕ್ರಮವಾಗಿ ಶ್ರೀಹರಿವಾಯುಸ್ತುತಿ ಹಾಗೂ ಸುಮಧ್ವವಿಜಯ ಕೃತಿಗಳಿಂದ ಇಡೀ ದ್ವೈತವೇದಾಂತಪರಂಪರೆ ಕಂಡ ಅಪ್ರತಿಮ ಗೃಹಸ್ಥಶೇಖರರು ಎಂಬ ವಿಶೇಷ ಹಿರಿಮೆಗೆ ಪಾತ್ರ-ರಾಗಿರುವರು. ಕಲ್ಯಾಣೀದೇವಿ ಎಂಬುವರು ಹಾಗೂ ಶ್ರೀನಾರಾಯಣಪಂಡಿತಾಚಾರ್ಯರ ಪುತ್ರ ಶ್ರೀವಾಮನಪಂಡಿತಾಚಾರ್ಯರು(ತ್ರೈವಿಕ್ರಮಾರ್ಯದಾಸರು) ಸಹ ಅನೇಕ ಗ್ರಂಥಗಳನ್ನು ರಚಿಸಿ-ರುವರು. ಶ್ರೀಜಯತೀರ್ಥಪೂರ್ವಕಾಲೀನರಾದ ಈ ಮಹನೀಯರಲ್ಲಿ ಹೆಚ್ಚಿನವರು ಪ್ರಾಚೀನ ಟೀಕಾಕಾರರೆಂಬುದಾಗಿ ಪ್ರಸಿದ್ಧರಾಗಿರುವರು. ಇವರಲ್ಲಿ ಹೆಚ್ಚು ಟೀಕಾಗ್ರಂಥಗಳನ್ನು ರಚಿಸಿದ ಕೀರ್ತಿ ಶ್ರೀಪದ್ಮನಾಭತೀರ್ಥರದು; ಎಂದರೆ ಪ್ರಾಚೀನಟೀಕಾಕಾರರಲ್ಲಿ ಇವರದೇ ಅಗ್ರಸ್ಥಾನ.

## ಶ್ರೀಅಕ್ಷೋಭ್ಯತೀರ್ಥರು

ಶ್ರೀಅಕ್ಷೋಭ್ಯತೀರ್ಥರು ಪ್ರಾಯಃ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯವರ್ಗದಲ್ಲಿ ವಯಸ್ಸಿನಲ್ಲಿ ಅತ್ಯಂತ ಕಿರಿಯರು; ಬ್ರಹ್ಮಚರ್ಯದಿಂದ ಸನ್ನ್ಯಾಸ ಸ್ವೀಕರಿಸಿದ ವೈಶಿಷ್ಟ್ಯ

೧. ಸುಗುಣನರಹರಿಶ್ರೀಮಾಧವಾಕ್ಷೋಭ್ಯರೂಪಾನ್
ಹರಿಭಜನನಿಯುಕ್ತಾನ್ ಶುದ್ಧಧರ್ಮಾರ್ಥಕಾಮಾನ್ ।
ಸುಜನನಿಯಮನಾರ್ಥಂ ಯಃ ಪ್ರಸಾಧ್ಯಾಪರೋಕ್ಷಂ
ಸ ಭವತು ಮಮ ಭೂತ್ಯೈ ಪದ್ಮನಾಭಾಖ್ಯಯೋಗೀ ॥
– ಶ್ರೀರಘೂತ್ತಮತೀರ್ಥರು (ನ್ಯಾಯವಿವರಣಟೀಕಾಭಾವಬೋಧ)

ಇವರದು[೧]. ಆಚಾರ್ಯರು ಬದರಿಗೆ ತೆರಳಿದ (ಕ್ರಿ.ಶ. ೧೨೮೦) ಅನಂತರ ಸುಮಾರು ಎಂಭತ್ತೇಳು ವರ್ಷಗಳಷ್ಟು ಕಾಲದ ಅವರ ಸುದೀರ್ಘಜೀವನ ಇದನ್ನು ಸ್ಫುಟಪಡಿಸುತ್ತದೆ. ಶ್ರೇಷ್ಠವಿದ್ವಾಂಸರೂ, ಮಹಾತಪಸ್ವಿಗಳೂ ಆಗಿದ್ದ ಇವರ ಆಳ್ವಿಕೆಯಲ್ಲಿ ದ್ವೈತದರ್ಶನದ ಪ್ರಸಾರ ತುಂಬ ವಿಶೇಷರೀತಿಯಲ್ಲೇ ನಡೆಯಿತು. ವಿದ್ಯಾರಣ್ಯರಂತಹ ಅದ್ವೈತಮತದ ಮಹಾ-ವಿದ್ವಾಂಸರನ್ನು 'ತತ್ತ್ವಮಸಿ'ವಾಕ್ಯಾರ್ಥದಲ್ಲಿ ಪರಾಭವಗೊಳಿಸಿದ ಸಂಗತಿ ಇವರ ವಿದ್ವತ್ತು ಹಾಗೂ ವಾದಕೌಶಲಗಳಿಗೆ ಶ್ರೇಷ್ಠನಿದರ್ಶನ[೨].

ಇವರು ತಮ್ಮ ಉತ್ತರಾಧಿಕಾರಿಯನ್ನು ನಿಶ್ಚಯಿಸುವ ವಿಶಿಷ್ಟಸಮಸ್ಯೆಯನ್ನು ಎದುರಿಸ-ಬೇಕಾಯಿತು. ಆ ಮುಂಚಿನವರಿಗೆ ಆ ಬಗ್ಗೆ ಶ್ರೀಮದಾಚಾರ್ಯರ ಸ್ಪಷ್ಟ ಆದೇಶವಿದ್ದುದರಿಂದ ಈ ತೆರನಾದ ಸಮಸ್ಯೆ ಉದ್ಭವಿಸಿರಲಿಲ್ಲ. ವೇದಾಂತಸಾಮ್ರಾಜ್ಯ ನಿರ್ವಹಣೆಯಂತಹ ಅತ್ಯಂತ ಗುರುತರ ಹೊಣೆಯನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಸೂಕ್ತವ್ಯಕ್ತಿಗಾಗಿ ಅವರು ಅನ್ವೇಷಣೆ ನಡೆಸಿದರು. ಪೀಠಾಧಿಪತ್ಯವೆಂದರೆ ಸಮಗ್ರಸಮಾಜಕ್ಕೇ ಪರಿಪೂರ್ಣವಾದ ಮಾರ್ಗದರ್ಶನ-ವನ್ನು ನೀಡಬಲ್ಲ ಶ್ರೇಷ್ಠಪದವಿ. ಜನಸಾಮಾನ್ಯರಂತೆ ಆಳುವ ದೊರೆಗಳನ್ನೂ ಸಹ ತಾತ್ತ್ವಿಕ ಉಪದೇಶಗಳ ಮೂಲಕ ಧರ್ಮಪರರನ್ನಾಗಿ ಮಾಡುವ ಹೊಣೆಗಾರಿಕೆ ಅವರದು. ಅದಕ್ಕೆ ವಿದ್ವತ್ತು, ತಪಸ್ಸು, ಆಡಳಿತಕೌಶಲ, ವೈರಾಗ್ಯ ಮೊದಲಾದ ಗುಣಸಂಪತ್ತಿ ಅತ್ಯಂತ ಆವಶ್ಯಕ; ಪಾಠಪ್ರವಚನಕೌಶಲ, ವಾದಕೌಶಲಗಳಂತೂ ಅದರ ಅತ್ಯಂತ ಪ್ರಧಾನವಾದ ಅರ್ಹತೆಗಳು. ಈ ಹಿನ್ನೆಲೆಯಲ್ಲಿ ಯಾವ ಸಂಸಾರಿಗೂ ಇರದಂತಹ ವಿಶಿಷ್ಟವಾದ ಹೊಣೆ ತನ್ನ ಉತ್ತರಾಧಿ ಕಾರಿಯ ಬಗ್ಗೆ ಪೀಠಾಧಿಪತಿಗೆ ಇರುವಂತೆ ಮಾಡುತ್ತದೆ. ಈ ಎಚ್ಚರದಿಂದ ಉತ್ತರಾಧಿಕಾರಿಯ ಆಯ್ಕೆ ನಡೆದಾಗ ಮಠ ಹಾಗೂ ಸಮಾಜ ಎರಡೂ ಉಳಿಯುತ್ತವೆ. ಇಲ್ಲವಾದಲ್ಲಿ ಅವೆರಡಕ್ಕೂ ಅಳಿಗಾಲ ತಪ್ಪಿದ್ದಲ್ಲ. ಕೆಟ್ಟ ರಾಜನಿಂದ ಜನಗಳ ಲೌಕಿಕ ಜೀವನ ದುರಂತಮಯವಾಗುವಂತೆ, ಕೆಟ್ಟ ಪೀಠಾಧಿಪತಿಯಿಂದ ಜನಗಳ ಧಾರ್ಮಿಕಜೀವನ ಕಲಂಕಿತವಾಗುತ್ತದೆ. ಕೆಟ್ಟ ರಾಜನಿಂದ ಇಹಜೀವನ ದುರ್ಭರವೆನ್ನಿಸಿದರೆ, ಕೆಟ್ಟ ಗುರುವಿನಿಂದ ಇಹಪರಗಳೆರಡೂ ದುರ್ಭರವಾಗುತ್ತದೆ. ಈ ಹಿನ್ನೆಲೆಯಲ್ಲಿ ಶ್ರೀಅಕ್ಷೋಭ್ಯತೀರ್ಥರು ಉತ್ತರಾಧಿಕಾರಿಯ ಅನ್ವೇಷಣೆಯನ್ನು ತಪಸ್ಸಿನಂತೆ ಮಾಡುವುದು ಅನಿವಾರ್ಯವಾಯಿತು. ಕೊನೆಗೆ ಅವರು ಶರಣು ಹೋಗಿದ್ದು ಸಹ ಅಂತಹ

---

೧. ಕರ್ನಾಟಮುತ್ತರಾದಿಂ ಚ ಬ್ರಹ್ಮಚರ್ಯಸ್ಥಿತಂ ಸದಾ – ಗುರುಚರ್ಯಾ

೨. **ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।**
**ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥**

ಈ ಶ್ಲೋಕವನ್ನು ಕೂಡಲಿ ಆರ್ಯ ಅಕ್ಷೋಭ್ಯತೀರ್ಥಸಂಸ್ಥಾನದ ಪೀಠಾಧೀಶರಾಗಿದ್ದ ಶ್ರೀ-ನಾರಾಯಣತೀರ್ಥಲಿಖಿತವಾದ ಹಸ್ತಪ್ರತಿಯಲ್ಲಿ ಕಾಣಬಹುದು. ವಿವರಗಳಿಗೆ ತತ್ತ್ವವಾದ (ನವೆಂಬರ್ ೧೯೮೦) ಸಂಚಿಕೆಯಲ್ಲಿನ 'ಒಂದು ಅಪೂರ್ವದಾಖಲೆ' ಎಂಬ ನನ್ನ ಲೇಖನವನ್ನು ನೋಡಬಹುದು.

ತಪಸ್ಸಿಗೇ. ಪಂಡರಪುರದಲ್ಲಿ ನೆಲೆಸಿ, ಶ್ರೀಮಧ್ವಮಾಧವರನ್ನು ಅವರು ಅದಕ್ಕೆಂದೇ ಆರಾಧಿಸತೊಡಗಿದರು. ಅದರ ಫಲಶ್ರುತಿಯಾಗಿ ಅವರಿಗೆ ಸ್ವಪ್ನಸೂಚನೆಯೊಂದು ಲಭಿಸಿತು. 'ಭೀಮಾನದಿಯಲ್ಲಿ ಅಶ್ವಾರೋಹಿಯಾಗಿಯೇ ನುಗ್ಗಿ ಬಾಯಿಹಚ್ಚಿ ಜಲಪಾನ ಮಾಡುವ ವಿಚಿತ್ರವ್ಯಕ್ತಿಯೇ ನಿಮ್ಮ ಉತ್ತರಾಧಿಕಾರಿ; ಶಿಷ್ಯನಾದ ಅರ್ಜುನನಿಂದ ದ್ರೋಣಾಚಾರ್ಯರು ಕೀರ್ತಿಶಾಲಿಗಳಾದಂತೆ ಆ ವ್ಯಕ್ತಿಯಿಂದ ನೀವು ಅಪಾರ ಕೀರ್ತಿಶಾಲಿಗಳೆನ್ನಿಸುವಿರಿ'. ಇದು ಶ್ರೀಅಕ್ಷೋಭ್ಯತೀರ್ಥರಿಗೆ ಅಚ್ಚರಿ ಎನ್ನಿಸಿದರೂ, ಭಗವಂತನ ಅಚಿಂತ್ಯಾದ್ಭುತಮಹಿಮೆಯನ್ನು ಬಲ್ಲ ಅವರಿಗೆ ಅದು ಅಸಂಭಾವ್ಯವೆಂದೇನೂ ಎನ್ನಿಸಲಿಲ್ಲ.

## ಶ್ರೀಜಯತೀರ್ಥರ ಪೂರ್ವಜೀವನ

ಕಾಗಿನೀತೀರದ ಮಳಖೇಡ ಸಾದಿನಾಡು ಎಂದು ಪ್ರಸಿದ್ಧವಾದ ಅರಸೊತ್ತಿಗೆ. ಅಶ್ವಾರೋಹಿಗಳಾಗಿ ಹೋರಾಡಿ ಸಮರದಲ್ಲಿ ಜಯಗಳಿಸುವುದು ಅದರ ಹಿರಿಮೆ; ಅದಕ್ಕೆಂದೇ ಅದಕ್ಕೆ ಸಾದಿನಾಡು ಎಂಬ ಆ ಹೆಸರು ಎಂದು ಪ್ರತೀತಿ. ಮಾನ್ಯಖೇಟ[1] ಎಂಬುದು ಅದರ ಪ್ರಾಚೀನ ಹೆಸರು. ಹಿಂದೊಮ್ಮೆ ರಾಷ್ಟ್ರಕೂಟರ ರಾಜಧಾನಿ ಎನ್ನಿಸಿದ್ದ ಹಿರಿಮೆ ಅದರದು. ಧುಂಡಿರಾಜ[2](ನರಸಿಂಗರಾಯ) ಎಂಬವರು ಅದರ ಆಡಳಿತಸೂತ್ರವನ್ನು ವಹಿಸಿದ್ದರು; ಅವರು ಮಹಾರಾಷ್ಟ್ರ ಮೂಲದ ದೇಶಸ್ಥವೈಷ್ಣವಬ್ರಾಹ್ಮಣರು. ಅನೇಕ ಕಾರಣಗಳಿಂದ ಬ್ರಾಹ್ಮಣರು ಕ್ಷತ್ರಿಯಧರ್ಮ ಮೊದಲಾದವುಗಳನ್ನು ಅವಲಂಬಿಸುವ ಅಂದಿನ ಪದ್ಧತಿಯಿಂದಾಗಿ ಅವರು ಹಾಗೆ ಕ್ಷತ್ರಿಯಧರ್ಮದಲ್ಲಿ ತೊಡಗಿದ್ದರು; ಇದರಂತೆ ಶ್ರೀಪುರಂದರದಾಸರು, ಶ್ರೀಯದುಪತ್ಯಾಚಾರ್ಯರು ತಮ್ಮ ಪೂರ್ವಜೀವನದಲ್ಲಿ ಜಿನಿವಾರವೃತ್ತಿಯನ್ನು ಅವಲಂಬಿಸಿದ್ದಂತೆ ತಿಳಿಯುತ್ತದೆ.

ಅವರ ಅಧಿಕಾರ ವ್ಯಾಪ್ತಿ ಭೀಮಾತೀರದ ಮಂಗಳವೇಢೆಯವರೆಗೂ ಹಬ್ಬಿತ್ತು. ಇವರ ಪತ್ನಿ ಮಂಗಳವೇಢೆ[3] ಪ್ರಾಂತದವರು. ಅಧಿಕಾರ, ಸಂಪತ್ತು, ಅನುರೂಪಳಾದ ಪತ್ನಿ ಮೊದಲಾದ

---

೧. ಆಸೀದಿಂದ್ರಪುರಾಧಿಕಂ ಪುರಮಿದಂ ಶ್ರೀಮಾನ್ಯಖೇಟಾಭಿಧಂ
ಯೇನೇದಂ ಚ ಸರಃ ಕೃತಂ ಗುರುತರಪ್ರಾಸಾದಮಂತಃಪುರಃ ॥

I-A-XII-P. ೨೬೪ ಕರ್ಡಾ ತಾಮ್ರಶಾಸನ

೨. ಧೋಂಡ್ಯಪಂಡಿತವರಾಭಿಧಯುಕ್ತಃ ಕಾಶ್ಯಪೀವಿಬುಧಪೂಜನದೀಕ್ಷಃ – ಜಯೀಂದ್ರೋದಯ (೩/೫)

೩. ಮಂಗಳವೇಢೆಯು ಪಂಡರಪುರದಿಂದ ಸೋಲಾಪುರಮಾರ್ಗದಲ್ಲಿ ೨೦ ಕಿ.ಮೀ. ದೂರದಲ್ಲಿರುವ ಪಟ್ಟಣ. ಅಂದಿನ ಅರಸೊತ್ತಿಗೆಗಳಲ್ಲಿ ಇದೂ ಒಂದಾಗಿತ್ತು. ಶ್ರೀಜಯತೀರ್ಥರ ಪೂರ್ವಾಶ್ರಮದ ತಂದೆತಾಯಿಗಳಿದ್ದ ಸ್ಥಳ ಎಂಬುದಾಗಿ ಪ್ರಸಿದ್ಧವಿರುವ ತಾಣವನ್ನು ಇಂದೂ ಇಲ್ಲಿ ಕಾಣಬಹುದು. ಅದು ವಿಶಾಲವಾದ ಪ್ರದೇಶವಾಗಿದ್ದು, ಸಹಜವಾಗಿಯೇ ಅನೇಕ ಕಡೆ ಶಿಥಿಲಗೊಂಡಿದೆ. ಅದರ ಬಹುಭಾಗ ಅನೇಕರ ವಾಸಸ್ಥಾನವಾಗಿ ರೂಪುಗೊಂಡಿದೆ. ಶ್ರೀಜಯತೀರ್ಥರು ಅವತರಿಸಿದ್ದ ಸ್ಥಳ ಎಂಬುದಾಗಿ

ಅನೇಕ ವೈಭವವನ್ನು ಪಡೆದಿದ್ದ ಅವರಿಗೆ ಯೋಗ್ಯಸಂತತಿಯನ್ನು ಪಡೆಯುವ ಆಸೆ ಮಾತ್ರ ಈಡೇರಿರಲಿಲ್ಲ. ಕೊನೆಗೊಮ್ಮೆ ಸಪತ್ನೀಕರಾಗಿ ಅವರು ಶ್ರೀರಾಮದೇವರನ್ನು ಆರಾಧಿಸಿದರು. ಅದರ ಫಲವಾಗಿ ಅವರಿಗೆ ಪುತ್ರರತ್ನವೊಂದು ಪ್ರಾಪ್ತವಾಯಿತು; ಹಾಗೆ ಮಗು ಜನಿಸಿದಾಗ ಅವರು ನೆಲೆಸಿದ್ದು ಪಂಡರಪುರದ ಬಳಿಯ ಮಂಗಳವೇಢೆಯಲ್ಲಿ. ಅದಕ್ಕೆ 'ರಘುನಾಥ' ಎಂದು ನಾಮಕರಣ[1] ಮಾಡಿದರು. ಲಕ್ಷಣಭರಿತವಾದ ಮಗುವು ಆರೋಗ್ಯ, ಆಯುಷ್ಯಗಳ ಸಂಗಮವಾಗಲಿ ಎಂಬ ಅಪೇಕ್ಷೆಯಿಂದ 'ಧೋಂಡೂ'[2] ಎಂಬ ನಾಮಾಂತರವನ್ನೂ ಇರಿಸಿದರು. ಹಾಗೆ ಅವರು ಇರಿಸಿದ ರಘುನಾಥ ಎಂಬ ಹೆಸರು ಮುಂದೆ ಆ ಮಗು ಶ್ರೀಜಯತೀರ್ಥರೆನ್ನಿಸಿ, ಬ್ರಹ್ಮಕರಾರ್ಚಿತವಾದ ಶ್ರೀಮೂಲರಘುನಾಥನನ್ನು ಆರಾಧಿಸುವ ಯತಿಶೇಖರನಾಗುವುದಕ್ಕೆ ಸೂಚನೆ ಎನ್ನಿಸಿದರೆ, ಧೋಂಡೂ ಎಂಬ ಹೆಸರು ಅವರು ಅಖಿಣಾಕ್ಷಸಮರಾದ ಶ್ರೀವಾಯುದೇವರ ಅವತಾರರಾದ ಶ್ರೀಮನ್ಮಧ್ವಾಚಾರ್ಯರ ಗ್ರಂಥ-ಗಳಿಗೆ ಟೀಕೆ ಬರೆಯುವ ಮುನ್ಸೂಚನೆಯಂತಾಯಿತು.

ಮಗುವು ವಿಶಿಷ್ಟ ಬಾಲಲೀಲೆಗಳಿಂದ ಮನೆಗೆ ಮಾತ್ರವಲ್ಲದೆ, ಸಕಲಜನರಿಗೂ ಕಣ್ಮಣಿ ಎನ್ನಿಸಿತು. ಆಟಪಾಠಗಳಲ್ಲೂ ಮಗುವಿನ ಪ್ರತಿಭೆ ಎಲ್ಲರಿಗೂ ಅಚ್ಚರಿ ಉಂಟುಮಾಡುತ್ತಿದ್ದಿತು. ಸಕಾಲದಲ್ಲಿ ಚೌಲ, ಉಪನಯನಗಳು ನಡೆದವು. ತಮ್ಮ ಕುಲಧರ್ಮಕ್ಕನುಗುಣವಾಗಿ ಮುಂದೆ ದಕ್ಷ ಆಡಳಿತಗಾರನಾಗಲು ಅನುವಾಗುವಂತೆ ಕುದುರೆ ಸವಾರಿ, ಕತ್ತಿವರಸೆ

---

ಪ್ರಸಿದ್ಧವಾಗಿರುವ ಸ್ಥಳದ ಭಾಗ ಇಂದು ಉಳಿದುಕೊಂಡು ಬಂದಿರುವುದು ವಿಶೇಷ. ಇದೂ ಸಹ ತುಂಬಾ ಶಿಥಿಲಾವಸ್ಥೆಯಲ್ಲಿದ್ದು ಅದರ ಪ್ರಾಚೀನ ಅವಶೇಷವಾಗಿ ಉಳಿದುಕೊಂಡಿರುವ ಬೃಹದಾಕಾರದ ಸ್ತಂಭ ಹಾಗೂ ತೊಲೆಗಳಲ್ಲಿ ಅದ್ಭುತವಾದ ಕೆತ್ತನೆಯ ಕಾರ್ಯವನ್ನು ಕಾಣಬಹುದು. ಶ್ರೀಜಯತೀರ್ಥರ ತಾಯಿಯ ತವರುಮನೆ ಇದೇ ಆದ್ದರಿಂದ ಇಲ್ಲಿಯೇ ಅವರ ಜನನವಾಯಿತು ಎಂಬುದು ಸಂಗತ-ವಾಗುವುದು. ಪಂಡರಪುರಕ್ಕೆ ಸನಿಹದಲ್ಲಿರುವ ಈ ಪ್ರಾಂತದವರಾದ ಶ್ರೀಜಯತೀರ್ಥರ ತಾಯಿಯ ಕಡೆಯವರು ವಿಠಲನ ಆರಾಧಕರಾಗಿದ್ದರು. ಶ್ರೀಜಯತೀರ್ಥರು ಪೂರ್ವಾಶ್ರಮದಲ್ಲಿ ಪೂಜಿಸಿದ ಶ್ರೀವಿಜಯವಿಠಲದೇವರ ವಿಗ್ರಹ ಹಾಗೂ ಇತರ ಪ್ರತಿಮೆಗಳು ಇಂದೂ ಇಲ್ಲಿ ಸುರಕ್ಷಿತವಾಗಿ ಉಳಿದುಕೊಂಡುಬಂದಿವೆ. ಇದಕ್ಕೆ ಸಂಬಂಧಿಸಿದ ಕೆಲವು ವರ್ಣಚಿತ್ರಗಳನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

೧. ವೃಷ್ಟಿಚೇಟಾಧಿಪೋ ಧೊಂಡೋ ರಘುನಾಥಾಭಿಧಃ ಪ್ರಭುಃ।
ಚತುರಂಗಬಲೋಪೇತೋ ಮೃಗಯಾಂ ಪ್ರಚರನ್ ವನೇ॥ – ಗುರುಚರ್ಯಾ
ಸಂಚರಂತೋ ಮಳೇಖೇಡಮಾಗತ್ಯಾಧಿಪತಿಂ ತದಾ।
ಧೋಂಡೋ ರಘ್ವೀಶನಾಮಾನಮಶ್ವಾರೂಢಮವೇಕ್ಷ್ಯ ಚ॥
– ಪೂರ್ಣಬೋಧಗುರುವಂಶಕಥಾಕಲ್ಪತರು (೬/೩೨,೩೩.)

೨. ಉಪಲವದ್ಭವಿತೇತಿ ಮನೀಷಯಾ ಪರವಿಭಂಗಕೃತೌ ನಿಜಭಾಷಯಾ।
ಸ್ವತನಯಸ್ಯ ಚಕಾರ ಸ ಧೋಂಡುರಾಡಿತಿ ತದಾಽದ್ಭುತನಾಮ ಸ ಸಾದಿರಾಟ್॥
–ವ್ಯಾಸತೀರ್ಥೀಯ ಜಯತೀರ್ಥವಿಜಯ(೩/೫)

ಮೊದಲಾದವುಗಳಲ್ಲಿ ಸೂಕ್ತ ಶಿಕ್ಷಣವನ್ನೂ ವಿಶೇಷವಾಗಿ ನೀಡಿದರು[೧]. ಅದರಲ್ಲೂ ಅವರ ಪ್ರತಿಭೆ ಅಚ್ಚರಿಯೆನ್ನಿಸುವಂತೆಯೇ ಇದ್ದಿತು. ಮಗನು ತಾರುಣ್ಯಕ್ಕೆ ಕಾಲಿಡುತ್ತಿದ್ದಂತೆಯೇ ಸತ್ಕುಲ ಪ್ರಸೂತಳಾದ, ರೂಪಗುಣೋಚಿತಳಾದ ಜಾನಕಿ ಎಂಬ ಕನ್ಯೆಯೊಂದಿಗೆ ವಿವಾಹವೂ ನಡೆ-ಯಿತು[೨]. ಸ್ವಲ್ಪದಿನಗಳ ಅಂತರದಲ್ಲೇ ಮತ್ತೊಬ್ಬ ಕನ್ಯೆಯೊಂದಿಗೂ ವಿವಾಹವಾಯಿತು. ಹೀಗೆ ಇಬ್ಬರು ಪತ್ನಿಯರನ್ನು ಹೊಂದಿದ ವೈಶಿಷ್ಟ್ಯ ಇವರದಾಗಿತ್ತು. ವೈಷ್ಣವಇತಿಹಾಸದಲ್ಲಿ ಪೀಠವೇರಿದ ಯತಿಯೊಬ್ಬ ಆ ಮುಂಚೆ ಹೀಗೆ ಇಬ್ಬರು ಪತ್ನಿಯರನ್ನು ಹೊಂದಿದ್ದ ವೈಶಿಷ್ಟ್ಯ ಇವರದು.

ಅಂದಿನ ಪದ್ಧತಿಯಂತೆ ಅವರಿಬ್ಬರೂ ವಿವಾಹಸಮಯದಲ್ಲಿ ಅಷ್ಟವರ್ಷಪ್ರಾಯದವರು. ಆದ್ದರಿಂದ ವಿವಾಹ ನಡೆದಿದ್ದರೂ ಅವರಿನ್ನೂ ಗಂಡನ ಮನೆಗೆ ಬರುವ ಪ್ರಸಂಗ[೩] ಒದಗಿರಲಿಲ್ಲ.

ಧೋಂಡೂ ರಘುನಾಥರಾಯರ ವಿವಿಧ ವಿದ್ಯಾಕೌಶಲ ಬೆರಗುಗೊಳಿಸುವಂತೆ ಪ್ರಕಟ-ವಾಗುತ್ತಲೇ ಇತ್ತು. ತಮ್ಮ ವಿಶಿಷ್ಟ ಗುಣಗಳಿಂದಾಗಿ ಅವರಾಗಲೇ ನಾಯಕರೆನ್ನಿಸಿ, ಅಪಾರ ಅನುಯಾಯಿಗಳ ಗೌರವಾದರಗಳಿಗೆ ಪಾತ್ರರಾಗಿದ್ದರು. ಗುಣವಿದ್ದಲ್ಲಿ ಮನ್ನಣೆ ಬಂದರೆ ಅಚ್ಚರಿ ಏನಿದೆ? ಮುಂದೆ ಗುರುಪೀಠವೇರುವ ಅವರು ರಾಜಪೀಠವನ್ನೇರುವ ಸನ್ನಾಹ-ದಲ್ಲಿದ್ದುದು ಮಾತ್ರ ವಿಧಿವಿಲಾಸವೇ ಆಗಿತ್ತು. ಮುಂದೆ ಗುರುಪೀಠವೇರಿ ಮನ್ನಣೆ ಪಡೆಯುವ ಅವರು ಈಗ ಆ ರೀತಿಯಾಗಿ ಜನಮನ್ನಣೆ ಪಡೆದ ನಾಯಕಶಿರೋಮಣಿಗಳೆನ್ನಿಸಿದ್ದು ಸಹಜವೇ ಆಗಿದ್ದಿತು. ಎಂದರೆ ನಾಯಕತ್ವದ ಗುಣ ಅವರಿಗೆ ಸ್ವಾಭಾವಿಕವಾಗಿಯೇ ಸಿದ್ಧಿಸಿತ್ತು.

ಅನುಯಾಯಿಗಳೊಂದಿಗೆ ವಿವಿಧ ಸ್ಥಳಗಳಿಗೆ ಅನೇಕ ಕಾರಣಗಳಿಂದಾಗಿ ಸಂಚರಿಸುವುದು ಅವರ ಹವ್ಯಾಸವಾಗಿತ್ತು. ಸಾದಿನಾಡು ಎಂಬ ಅವರ ಪ್ರಾಂತ ಹೆಸರಿಗೆ ತಕ್ಕಂತೆ ಅಶ್ವಾರೋಹಣದ ವಿಶಿಷ್ಟಕೌಶಲಕ್ಕೆ ಹೆಸರಾಗಿದ್ದಿತು. ಧೋಂಡೂ ರಘುನಾಥರಾಯ ಶ್ರೇಷ್ಠ ಅಶ್ವರೋಹಿಯಾಗಿಯೂ ಎಲ್ಲರ ಗಮನ ಸೆಳೆದಿದ್ದರು.

---

೧. ತುರಗಚಾರಣಧಾವನಮಂಡಲಭ್ರಮಣಕರ್ಮಣಿ ಲಕ್ಷ್ಮಪರೀಕ್ಷಣೇ।
ಸ್ವತನಯಂ ಸ ಚಕಾರ ವಿಚಕ್ಷಣಃ ಸ್ವತುರಗಾಧಿಪತಿಂ ಕೃತಶಿಕ್ಷಣಮ್ ॥ – ವ್ಯಾ.ಜ.ವಿ. ೩/೧೭
'ಅಶ್ವ್ಯೋ ವಾರೋ ಅಭವಸ್ತದಿಂದ್ರ ಸೃಕೇ ಯತ್ ತ್ವಾ ಪ್ರತ್ಯಹನ್ ದೇವ ಏಕಃ।
ಅಜಯೋ ಗಾ ಅಜಯಃ ಶೂರ ಸೋಮಮವಾಸೃಜಃ ಸರ್ತವೇ ಸಪ್ತ ಸಿಂಧೂನ್॥'
– ಋಗ್ವೇದ (೧/೩೨/೧೨)

೨. ಅಥ ಸುತಸ್ಯ ವಿವಾಹಮಹೋತ್ಸವಂ ವ್ಯತನುತ ಪ್ರಣಯೇನ ಶುಭಾವಹಂ।
ಪ್ರಣಯಿ ಬಂಧುಜನಸ್ಯ ತದಾ ಸುತಂ ಸ ಪರಿಗೃಹ್ಯ ಸುರೂಪಗುಣಾನ್ವಿತಮ್॥– ವ್ಯಾ.ಜ.ವಿ. (೩/೧೯)
ಅಥ ಜಾನಕೀತಿ ಶುಭನಾಮಯುಜಾ ನಿಜಭಾರ್ಯಯಾ ಸಹ ಧರೇಶಸುತಃ।
ಅಧಿಕಂ ಬಭೌ ಸಹ ಪುಲೋಮಜಯಾ ತ್ರಿದಶಾಧಿರಾಜ ಇವ ಪೀಠಗತಃ॥
-ಜಯೀಂದ್ರೋದಯ (೩/೫೦)

೩. 'ಪಿತೃಕೃತಶುಭವೈವಾಹಿಕೋ ನಾಸ್ಪೃಶತ್ ತಾಮ್' —ಅ.ಜ.ವಿ.(ಶ್ಲೋ. ೫)

## ಕಿಂ ಪಶುಃ ಪೂರ್ವದೇಹೇ ?

ಹಾಗಿದ್ದಾಗಲೊಮ್ಮೆ ತಮ್ಮ ಸಂಗಡಿಗರೊಂದಿಗೆ ಅವರು ಮೃಗಯಾವಿಹಾರಕ್ಕೆಂದು ಸಂಗಡಿಗರ ಸಮೇತ ಭೀಮಾನದಿಯತ್ತ ಸಾಗಿದ್ದರು. ಹೊಂಬಣ್ಣದ ಶರೀರ, ಮೈತುಂಬಾ ರತ್ನಖಚಿತವಾದ ಸ್ವರ್ಣಾಭರಣಗಳು, ಮೈಮೇಲೆ ಕವಚ, ತಲೆಯ ಮೇಲೆ ಶಿರಸ್ತ್ರಾಣ, ಕೈಯಲ್ಲಿ ಖಡ್ಗ – ಇಂತಹ ವೈಭವಪೂರ್ಣವಾದ ವೇಷದಲ್ಲಿ ಅವರು ಕಂಗೊಳಿಸುತ್ತಿದ್ದರು; ಅವರ ರಾಜಪೋಷಾಕಿಗೆ ಅಂದೇ ಕೊನೆಯ ದಿನವಾಗಿತ್ತು ಎಂಬುದು ಮಾತ್ರ ವಿಧಿವಿಲಾಸ. ಹೀಗೆ ಶಸ್ತ್ರಯೋಧನಾಗಿ ತೆರಳಿದ ಅವರು ಮುಂದೆ ಶಾಸ್ತ್ರಯೋಧರೆನ್ನಿಸಿ, ಶ್ರೀಮಧ್ವರಾಜರಿಂದ ಆದೃತರಾದದ್ದು ಇತಿಹಾಸ[೧].

ಭಗವತ್ಸಂಕಲ್ಪ; ಮಧ್ಯಾಹ್ನದ ಉರಿಬಿಸಿಲಿಗೆ ಅವರಿಗೆ ವಿಚಿತ್ರ ಬಾಯಾರಿಕೆ ಎನ್ನಿಸಿತ್ತು. ಬಳಲಿಕೆಯೂ ಕಾಣಿಸಿಕೊಂಡಿತ್ತು. ನೀರಿಗಾಗಿ ಹಾತೊರೆಯತೊಡಗಿದರು. ದೂರದಲ್ಲಿ ಕಂಡ ಭೀಮಾನದಿಯತ್ತ ಧಾವಿಸಿದರು. ಬಾಯಾರಿಕೆಯ ಒತ್ತಡದಿಂದಾಗಿ ನದಿಯನ್ನು ಸಮೀಪಿಸಿದರೂ, ಅದರಿಂದ ಇಳಿಯಲು ವ್ಯವಧಾನವಿಲ್ಲದಂತಾಯಿತು; ಬಾಯಾರಿಕೆ, ಆಯಾಸಗಳಿಂದ ಬಸವಳಿದಿದ್ದ ಕುದುರೆಗೂ ತನ್ನೊಂದಿಗೇ ನೀರು ಕುಡಿಸುವ ತವಕವೂ ಸೇರಿಕೊಂಡಿತು. ಪ್ರಾಣಿಗಳ ಮೇಲೆ ಹಾಗೆ ದಯೆ ತೋರುವ ಸ್ವಭಾವ ಮಹಾನುಭಾವರಿಗೆ ಅಪೂರ್ವವೇನಲ್ಲ. ಕುದುರೆಯ ಮೇಲೆ ಕುಳಿತೇ [೨]ನದಿಯೊಳಗೆ ನುಗ್ಗಿದರು. ಪ್ರವಾಹಕ್ಕೇ ಬಾಯಿ ಹಾಕಿ ನೀರನ್ನು ಕುಡಿಯತೊಡಗಿದರು[೩].

---

೧. ಯೇನಾಗಾಹಿ ಸಮಸ್ತಶಾಸ್ತ್ರಪೃತನಾರತ್ನಾಕರೋ ಲೀಲಯಾ
ಯೇನಾಖಂಡಿ ಕುವಾದಿಸರ್ವಸುಭಟಸ್ತೋಮೋ ವಚಃಸಾಯಕೈಃ।
ಯೇನಾಸ್ಥಾಪಿ ಚ ಮಧ್ವಶಾಸ್ತ್ರವಿಜಯಸ್ತಂಭೋ ಧರಾಮಂಡಲೇ
ತಂ ಸೇವೇ ಜಯತೀರ್ಥವೀರಮನಿಶಂ ಮಧ್ವಾಖ್ಯರಾಜಾದೃತಮ್ ॥

– ಶ್ರೀಸತ್ಯಪ್ರಿಯತೀರ್ಥವಿರಚಿತಾ ಶ್ರೀಜಯರಾಜಸ್ತುತಿಃ

೨. ಈ ಘಟನೆ ನಡೆದ ಸ್ಥಳ ಪಂಡರಪುರಕ್ಷೇತ್ರದಿಂದ ಸುಮಾರು ೪ ಕಿ.ಮೀ. ದೂರದಲ್ಲಿರುವ ಸಂಧ್ಯಾವಳಿ ಎಂದು ಪ್ರತೀತಿ.

೩.. ಅಥ ನೃಪತನಯೋಽಸೌ ಧೋಂಡುರಾಟ್ ಸ್ವೈಃ ಸುಹೃದ್ಭಿ-
ರ್ಹಯಚರಣವಿದಗ್ಧೈಃ ಸಾದಿಭಿಃ ಸಂಪರೀತಃ।
ಉಪವನವಿಹೃತಿಂ ದ್ರಾಕ್ ಕರ್ತುಕಾಮೋಽತಿವೇಲಂ
ಸಮುಗಮದುರುಕಾಂತಂ ಭೀಮರಥ್ಯಾಸ್ತಟಾಂತಮ್ ॥
ಧೃತಕನಕವಿಭೂಷೋ ವರ್ಮಸೂಷ್ಣೀಷವೇಷಃ
ಕನಕರುಚಿಶರೀರಃ ಖಡ್ಗಖೇಟಾಸಿಧಾರೀ।
ರವಿಕಿರಣವಿಷಣ್ಣೋ ವಾಜಿವರ್ಯೇ ನಿಷಣ್ಣೋಽ-
ಪ್ಯಪಿಬದವನತಾಂಗೋ ವಾರಿ ಗೋವತ್ ತಟಸ್ಥಾಮ್ ॥ –ವ್ಯಾ.ಜ.ವಿ.(೪/೫,೬)

ಇದನ್ನೆಲ್ಲಾ ಅತ್ಯಂತ ಸೋಜಿಗದಿಂದ ಶ್ರೀಅಕ್ಷೋಭ್ಯತೀರ್ಥರು ಗಮನಿಸುತ್ತಿದ್ದರು. ಸ್ವಪ್ನ-[೧]ಸೂಚನೆಯಂತೆ ಅವರು ಆ ಮೊದಲೇ ಅಲ್ಲಿಗೆ ಆಗಮಿಸಿ, ಅದಕ್ಕಾಗಿ ನಿರೀಕ್ಷಿಸುತ್ತಿದ್ದರು. ಈ ದೃಶ್ಯ ಕಾಣುತ್ತಿದ್ದಂತೆಯೇ ಅವರ ಬಾಯಿಂದ ಉದ್ಗಾರ ಹೊರಟಿತು – **'ಕಿಂ ಪಶುಃ ಪೂರ್ವದೇಹೇ?'** (ನೀನು ಹಿಂದಿನ ಜನ್ಮದಲ್ಲಿ ಪಶುವಾಗಿದ್ದೆಯೋ?).

ಮೇಲ್ನೋಟಕ್ಕೆ ಇದು ಇಂತಹ ದೃಶ್ಯ ಕಂಡಾಗ ಯಾರ ಬಾಯಿಂದಾದರೂ ಹೊರಡ-ಬಹುದಾದ ಸಹಜವಾದ ಉದ್ಗಾರ. ಆದರೆ ಇಲ್ಲಿಯ ಹಿನ್ನಲೆ ಮಾತ್ರ ತೀರ ವಿಭಿನ್ನವಾಗಿತ್ತು.

## ಶ್ರೀಜಯತೀರ್ಥರ ಪೂರ್ವಜನ್ಮ

ಹಿಂದೊಮ್ಮೆ ಶ್ರೀಮದಾನಂದತೀರ್ಥರು ನೆರೆದಿದ್ದ ಅಪಾರ ಶಿಷ್ಯವೃಂದಕ್ಕೆ ಪಾಠ ಹೇಳುತ್ತಿದ್ದ ವಿಶಿಷ್ಟ ಸನ್ನಿವೇಶ; ಶ್ರೋತೃಗಳೆಲ್ಲ ವಿವಿಧಶಾಸ್ತ್ರಪಾರಂಗತರು; ಸದಾಚಾರಾದಿಗುಣಭರಿತರು; ಒಂದರ್ಥದಲ್ಲಿ ಅವರೆಲ್ಲ ಭುವಿಗಿಳಿದ ದೇವತೆಗಳೇ. ಗುರುಗಳಾದ ಶ್ರೀಮದಾನಂದತೀರ್ಥರಂತು ಭುವನಪಾವನರಾದ ಸಾಕ್ಷಾತ್ ಪವಮಾನ; ಮಾತಿನ ಅಧಿದೇವತೆಯಾದ ಭಾರತೀದೇವಿಯ ಮನೋವಲ್ಲಭರು. ವಿಷಯವೋ ಬ್ರಹ್ಮಸೂತ್ರ, ಗೀತೆ, ಉಪನಿಷತ್ತುಗಳ ಮೇಲೆ ತಾವು ರಚಿಸಿದ್ದ ಅಪೂರ್ವಭಾಷ್ಯಗಳು. ನಿರೂಪಣಾಕೌಶಲವಂತೂ ರುದ್ರಾದಿದೇವತೆಗಳಿಗೂ ಅಚ್ಚರಿ ಎನ್ನಿಸುವಷ್ಟು ಅಪೂರ್ವ. ಗಂಗಾಪ್ರವಾಹವನ್ನು ನಾಚಿಸುವಂತಹ ವಾಗ್ಝರಿ. ಅವರ ಗ್ರಂಥಗಳಿಗೆ ಅವರು ನೀಡುತ್ತಿದ್ದ ವಿವರಣೆ ಶ್ರೋತೃಗಳಲ್ಲಿ ವಿದ್ಯುತ್ಸಂಚಾರವನ್ನು ಮಾಡಿಸುವಂತಿತ್ತು. ಮೇಲ್ನೋಟಕ್ಕೆ ಸರಳವಾಗಿ ಕಾಣುತ್ತಿದ್ದ ಅವರ ಮಾತುಗಳಲ್ಲಿ ಅಡಗಿದ್ದ ಗಾಂಭೀರ್ಯ ಅವರ ವಿವರಣೆಯಿಂದ ಸ್ಫುಟವಾಗುತ್ತಿದ್ದಂತೆ, ಅಧ್ಯಾತ್ಮಲೋಕದ ವಿಶ್ವರೂಪವನ್ನೇ ಕಂಡ ದಿವ್ಯಾನು-ಭೂತಿ ಶ್ರೋತೃಗಳದಾಗುತ್ತಿತ್ತು. ಎಂತಹ ಗ್ರಂಥ! ಎಂತಹ ವಿವರಣೆ ! ಇದೆಲ್ಲ ಬರವಣಿಗೆಯಲ್ಲಿ ವಿನ್ಯಾಸವಾಗಬೇಕಲ್ಲ! ಆಗ ಮಾತ್ರವೇ ಇದು ಇಂದಿನ, ಮುಂದಿನ ಜಿಜ್ಞಾಸುಗಳಿಗೆ ಪೂರ್ಣವಾಗಿ ತಲುಪಲು ಸಾಧ್ಯ ಎಂಬ ಭಾವ ಪ್ರತಿಯೊಬ್ಬರಲ್ಲಿಯೂ ಮೂಡಿದ್ದಿತು.

ವಿದ್ವದ್ವೃಂದ ಹಾಗೆಂದುಕೊಳ್ಳುತ್ತಿರುವಾಗಲೇ ಪ್ರಮುಖ ಶಿಷ್ಯರಲ್ಲಿ ಕೆಲವರು ಕೇಳಿಯೇ ಬಿಟ್ಟರು – 'ಪೂಜ್ಯರೇ, ತಮ್ಮ ಅದ್ಭುತಗ್ರಂಥಗಳ ಇಂತಹ ಅಪೂರ್ವ ವಿವರಣೆಯನ್ನು ಟೀಕಾಗ್ರಂಥಗಳ ರಚನೆಯ ಮೂಲಕ ತಿಳಿಸುವ ಭಾಗ್ಯಶಾಲಿ ಯಾರು?'.

ತತ್ಕ್ಷಣ ಶ್ರೀಮದಾಚಾರ್ಯರು ಉತ್ತರಿಸಿದರು – 'ಆ ಭಾಗ್ಯಶಾಲಿ ಇಲ್ಲಿ ಕುಳಿತಿರುವ ಈ ವೃಷಭ'.

---

ಅಶ್ವಸ್ಥ ಏವ ಭೃಶನಿಮ್ನಜಲೇ ಪ್ರವಿಷ್ಟಃ
ಸಂಯೋಜ್ಯ ವಾರಿ ಪಿಬತಿ ಸ್ಮ ಮುಖೇನ ಗೋವತ್॥– ಛಲಾರೀಯಜಯತೀರ್ಥವಿಜಯ (೨/೩.೯)

೧. ಅವದದಿತಿ ಯತೀಂದ್ರಂ ಸ್ವಪ್ನಗಃ ಪೂರ್ಣಸಂಖ್ಯಃ। –ವ್ಯಾ.ಜ.ವಿ. ೬/೩.

ಜನರಿಗುಂಟಾದ ಸೋಜಿಗಕ್ಕೆ ಮಿತಿಯೇ ಇರಲಿಲ್ಲ. ಆ ಎತ್ತನ್ನು ಅವರೆಲ್ಲ ಗಮನಿಸಿಯೇ ಇದ್ದರು. ಅದು ಪ್ರತಿನಿತ್ಯ ಆಚಾರ್ಯರ ಪಾಠದ ಸಮಯದಲ್ಲಿ ಹಾಜರಿದ್ದು ಅವರ ಪ್ರತಿಯೊಂದು ಪದವನ್ನೂ ಆಲಿಸುತ್ತಿತ್ತು. ಉಳಿದ ವೇಳೆಯಲ್ಲಿ ಆಹಾರವನ್ನು ಮೆಲುಕು ಹಾಕುವಂತೆ ಆ ವಿಚಾರವನ್ನೇ ಮೆಲುಕು ಹಾಕುತ್ತಾ ಕುಳಿತಿರುತ್ತಿತ್ತು. ಸಂಚಾರದ ವೇಳೆಯಲ್ಲಿ ಶ್ರೀಮದಾಚಾರ್ಯರ ಸಮಗ್ರಗ್ರಂಥಭಂಡಾರ ಅದರ ಬೆನ್ನ ಮೇಲೆ ಸ್ಥಾಪಿತವಾಗುತ್ತಿತ್ತು. ಹೀಗೆ ಸಂಚಾರ ಸಮಯದಲ್ಲಿ ಬೆನ್ನ ಮೇಲೆ ಶಾಸ್ತ್ರ ಉಳಿದಂತೆ ಮೈಮನಗಳಲ್ಲಿ ಶಾಸ್ತ್ರ ಪಾಠದ ಸಮಯದಲ್ಲಿ ಕಿವಿಯಲ್ಲಿ ಶಾಸ್ತ್ರ 'ಕರ್ಮಣಾ ಜ್ಞಾನಮಾಪ್ನೋತಿ' ಎಂಬ ಶಾಸ್ತ್ರಸಂದೇಶಕ್ಕೆ ನಿದರ್ಶನದಂತಿತ್ತು. ಇದನ್ನು ಗಮನಿಸಿದ ಜನ ಅದೊಂದು ಸುಜೀವಿ ಎಂಬುದನ್ನು ಮಾತ್ರ ಗುರುತಿಸಿದ್ದರು. ಆದರೆ ಅವರಿಗಿಂದು ತಿಳಿಯಿತು – ಅದು ಬರಿ ಕೇಳುವ ಚೇತನವಲ್ಲ; ಹಾಗೆ ಕೇಳಿದ್ದನ್ನೆಲ್ಲ ಬರೆದಿಟ್ಟು ಟೀಕಾಕೃತ್ಪಾದರೆನ್ನಿಸುವ ದೈವೀಚೇತನ. ಜನರಿಗೆ ಸಂಭ್ರಮವೋ ಸಂಭ್ರಮ. ಆಚಾರ್ಯರ ಪ್ರವಚನಕೌಶಲ ಜನರಿಗಲ್ಲ, ದನಗಳಿಗೂ ತಿಳಿಯುವಷ್ಟು ಅದ್ಭುತ. ಆದರೆ ಅವರಿಗೆ ಮತ್ತೊಂದು ತಿಳಿದಿರಲಿಲ್ಲ, ಅದು ಬರಿ ಕೇಳುವ, ಬರೆಯುವ ಎತ್ತಲ್ಲ; ಹಾಗೆ ಕೇಳಲೆಂದೇ, ಬರೆಯಲೆಂದೇ ಅವತರಿಸಿ ಬಂದಿದ್ದ ಸಾಕ್ಷಾತ್ ಸ್ವರ್ಗಾಧಿಪತಿ ದೇವೇಂದ್ರ[೧].

---

೧. ಇಂದ್ರದೇವರು ಹಾಗೆ ವೃಷಭರೂಪದಿಂದ ಭಗವತ್ಕಾರ್ಯದಲ್ಲಿ ತೊಡಗುವ ಉಲ್ಲೇಖ ವೇದದಲ್ಲೂ ಬಂದಿದೆ :

೧.'ವೃಷಾಯಮಾಣೋ ಅವೃಣೀತ ಸೋಮಂ ತ್ರಿಕದ್ರುಕೇಷ್ವಪಿಬತ್ ಸುತಸ್ಯ ।
ಆ ಸಾಯಕಂ ಮಘವಾದತ್ತವಜ್ರಮಹನ್ನೇನಂ ಪ್ರಥಮಜಾಮಹೀನಾಮ್' – ಋಗ್ವೇದ (೧/೩೨/೩)
'ಎಷ್ಟೇ ಸೋಮಂ ತೃಷಿತೋ ಯದ್ವದೇವ ವೃಷಾಽಪಿಬತ್ ಸವನೇಷು ತ್ರಿಷು ಸ್ಮ ।' – ಋಗ್ಭಾಷ್ಯ
'.......... ವೃಷಾ ವೃಷಭಃ – ಋಗ್ಭಾಷ್ಯಟೀಕಾ

೨. 'ಶಶಾದಸ್ಯ ತು ದಾಯಾದಃ ಕಕುತ್ಸ್ಥೋ ನಾಮ ವೀರ್ಯವಾನ್ ।
ಇಂದ್ರಸ್ಯ ವೃಷಭೂತಸ್ಯ ಕಕುತ್ಸ್ಥೋಽಜಯತಾಸುರಾನ್ ॥'

– ಎಂಬುದಾಗಿ ಹರಿವಂಶ(೧/೧೧/೧೯)ದಲ್ಲಿ ಕಕುತ್ಸ್ಥನಿಗೆ ಇಂದ್ರದೇವರು ವೃಷಭರೂಪದಿಂದ ಸಹಾಯಕರಾಗಿ ಜಯ ತಂದಿತ್ತ ವಿವರ ಬಂದಿದೆ. ಇದರಿಂದ ಇಂದ್ರದೇವರಿಗೆ ವೃಷಭರೂಪ-ಧಾರಣವು ಅನೇಕ ಸಲ ವಿಹಿತವಾಗಿರುವುದು ಇದರೊಂದಿಗೆ ಸಿದ್ಧಪಡುತ್ತದೆ. 'ತೃತೀಯಮಸ್ಯ ವೃಷಭಸ್ಯ ದೋಹಸೇ' ಎಂಬ ಬಳಿತ್ಥಾಸೂಕ್ತದ ಮಾತಿನಲ್ಲೂ ವೃಷಭರೂಪದ ಇಂದ್ರದೇವರಿಗೆ ಜ್ಞಾನದೋಹನವು ಮಧ್ವಾವತಾರದ ಒಂದು ಮುಖ್ಯ ಉದ್ದೇಶವಾಗಿದ್ದಿತು ಎಂಬ ಸೂಚನೆಯನ್ನು ಗುರುತಿಸಬಹುದು.

ಶ್ರೀಮಾನಿಂದ್ರಃ ಸುಧೀಮಾನ್ ಗಿರಿಶಮುಖಸುರೈಃ ಪ್ರಾರ್ಥ್ಯಮಾನಂ ಸುಶಾಸ್ತ್ರಂ
ಶ್ರೋತುಂ ತ್ವೇಕಾಗ್ರ್ಯಬುದ್ಧ್ಯಾ ವೃಷಭತನುರಭೂಚ್ಛ್ರೀಮದಾನಂದತೀರ್ಥಾತ್ ।
ಧೃತ್ವಾ ತಚ್ಛಾಸ್ತ್ರಭಾರಂ ಪ್ರತಿದಿನಮಶೃಣೋದ್ವಾಚ್ಯಮಾನಂ ಸುಶಾಸ್ತ್ರಂ
ಪ್ರಾಂತೇಽಸೌ ಸೂಪವಿಶ್ಯ ದ್ವಿಜಗಣಸಹಿತೋ ಗ್ರಂಥಭಾವಂ ದಧಾನಃ ॥

– ಅಣುಜಯತೀರ್ಥವಿಜಯ (ಶ್ಲೋ. ೨)

ಹಾಗೆ ಸಂಭ್ರಮಪಟ್ಟ ಜನಗಳ ಮಧ್ಯೆ ಮಾತ್ಸರ್ಯಪಟ್ಟ ಕೆಲವರೂ ಇದ್ದರು. ಅದು ಸಾಮಾನ್ಯವಾಗಿ ಸಜ್ಜನರಲ್ಲದವರ ಸ್ವಭಾವ. ಆದರೆ ಇಲ್ಲಿ ಮಾತ್ರ ಅದು ಸ್ವಭಾವವಾಗಿರದೆ, ಅದು ಅವರ ಪ್ರಾರಬ್ಧವಾಗಿತ್ತು. ತಮ್ಮಂತಹ ಮಾನವಶ್ರೇಷ್ಠರಿಗೆ ದೊರೆಯಬಹುದೆಂದು ಭಾವಿಸಿದ್ದ ಭಾಗ್ಯ ಈ ನಾಲ್ಕು ಕಾಲಿನ ಪಶುವಿನದಾಗಬೇಕೇ? ಅವರಿಗೆ ತಡೆಯಲಾಗಲಿಲ್ಲ; ಶಪಿಸಿಯೇ ಬಿಟ್ಟರು – 'ಈ ಎತ್ತು ಹಾವು ಕಚ್ಚಿ ಸಾಯಲಿ'[1]. ಅವರಿಗೆ ಶಾಪ ಕೊಡುವ ಶಕ್ತಿ ಇದ್ದರೂ, ಅದರ ಹಿನ್ನೆಲೆ ಅರ್ಥಮಾಡಿಕೊಳ್ಳುವ ವಿವೇಕ ಇಲ್ಲವಾಗಿದ್ದಿತು. ಹೀಗೆ ಹಾವು ಕಚ್ಚಿ ಸಾಯಲಿ ಎಂದು ಶಪಿಸುವ ಬ್ರಾಹ್ಮಣರ ಸ್ವಭಾವ ತಕ್ಷಕನಿಂದ ಕಚ್ಚಲ್ಪಟ್ಟು ಪರೀಕ್ಷಿದ್ರಾಜನು ಸಾಯಲಿ ಎಂಬ ಶೃಂಗಿಯ ಶಾಪದಲ್ಲೂ ಗೋಚರಿಸುತ್ತದೆ. ಅಲ್ಲಿ ಶಾಪ ಪಡೆದದ್ದು ಪರೀಕ್ಷಿದ್ರಾಜ; ಅವನು ಅರ್ಜುನನ ಮೊಮ್ಮಗ; ಇಲ್ಲಿ ಶಾಪ ಪಡೆದದ್ದು ವೃಷಭರೂಪದ ಇಂದ್ರ; ಆಗಂತೂ ಸ್ವತಃ ಅರ್ಜುನನೇ ಆಗಿದ್ದವನು.

ಶ್ರೀಮದಾಚಾರ್ಯರು ಸರ್ವಜ್ಞರು. ಅವರ ಮುಖದ ಮಂದಹಾಸ ಮಾಸಲೇ ಇಲ್ಲ. ಸ್ವತಃ ಮುಖ್ಯಪ್ರಾಣನಾದ ಅವರಿಗೆ ಆ ಶಾಪವನ್ನು ವ್ಯರ್ಥಗೊಳಿಸಲು ಸಾಧ್ಯವಿತ್ತು. ಆದರೆ ಬ್ರಾಹ್ಮಣಶಾಪವೆಂದರೆ ಭಗವದ್ವಾಕ್ಯವಿದ್ದಂತೆ; 'ವಿಪ್ರವಾಕ್ಯೋ ಜನಾರ್ದನಃ', 'ಬ್ರಾಹ್ಮಣೋಽಸ್ಯ ಮುಖಮಾಸೀತ್'. ಅದು ವ್ಯರ್ಥವಾಗಕೂಡದು. ಸಮಯ ಕಳೆಯಿತು. ಹಾವೊಂದು ಬಂದು ಆ ಎತ್ತನ್ನು ಕಚ್ಚಿಯೇ ಬಿಟ್ಟಿತು. ಆ ಎತ್ತು ಸತ್ತೂ ಹೋಯಿತು. ವಿಜಯದ ನಗೆ ಶಪಿಸಿದ್ದ ಶಿಷ್ಯರದಾಯಿತು. ಅವರೆಲ್ಲ ನೋಡುತ್ತಿದ್ದಂತೆಯೇ ಶ್ರೀಮದಾಚಾರ್ಯರು ಕೈಯಲ್ಲಿ ಕಮಂಡಲುವಿನ ನೀರನ್ನು ಹಾಕಿಕೊಂಡು, ತಾವು ಆ ಮುನ್ನ ರಚಿಸಿದ್ದ ದ್ವಾದಶಸ್ತೋತ್ರವನ್ನು ಪಠಿಸತೊಡಗಿದರು[2]. ಅದು ಮುಗಿಯುತ್ತಿದ್ದಂತೆಯೇ, ಆ ಜಲವನ್ನು ಆ ಎತ್ತಿನ ಮೃತದೇಹದ ಮೇಲೆ ಪ್ರೋಕ್ಷಿಸಿದರು. ಜನರಿಗೆಲ್ಲ ಅಚ್ಚರಿಯೋ ಅಚ್ಚರಿ. ಸತ್ತ ಎತ್ತು ನಿದ್ರೆಯಿಂದ ಎಚ್ಚೆತ್ತಂತೆ ಎದ್ದು ಕುಳಿತಿತು. ಪ್ರಾಣಶಾಸ್ತ್ರವನ್ನು ಕೇಳಿದ್ದ ಆ ಪ್ರಾಣಿಯ ದೇಹದಲ್ಲಿ ಪುನಃ ಪ್ರಾಣಸಂಚಾರವಾಯಿತು. ಅದರ ತೇಜಸ್ಸು ಮುಂಚೆಗಿಂತ ನೂರ್ಮಡಿಯಾಗಿದ್ದಿತು. ವಿಪ್ರಶಾಪ

---

೧. ಶೇಷಾದೀನಾಮಗಮ್ಯಂ ತವ ಮುಖಜನಿತಂ ಶಾಸ್ತ್ರಮಾಲೋಡ್ಯ ಕೇ ವಾ
ವ್ಯಾಖ್ಯಾಸ್ಯಂತೀತಿ ಪೃಷ್ಟಃ ಸುಖಮುನಿರವದತ್ ಸುಸ್ಮಿತಾಸ್ಯೋಽಥ ಶಿಷ್ಯೈಃ ।
ವ್ಯಾಖ್ಯಾಸ್ಯತ್ಯೇಷ ಗೋರಾಡಿತಿ ಕುಪಿತತರಾ ಶಿಷ್ಯಕಾಃ ಶೇಪುರೇನಂ
ಗೋರಾಜೋಽಸಾವಯೋಗ್ಯಃ ಪ್ರವಚನಸಮಯೇ ಸರ್ಪದಷ್ಟೋ ಮ್ರಿಯೇತ ॥
– ಅಣುಜಯತೀರ್ಥವಿಜಯ (ಶ್ಲೋ. ೩.)

೨. ಇತ್ಥಂ ಶಪ್ತಂ ಸ್ವಶಿಷ್ಯೈರ್ವೃಷಭತನುಮಸೌ ಶ್ರೀಪತಿಃ ಕ್ಷೇಮದೋಽಯಂ
ದತ್ವಾ ಶಾಪಸ್ಯ ಮೋಕ್ಷಂ ಪ್ರವಚನಸಮಯೇ ದ್ವಾದಶಸ್ತೋತ್ರಪಾಠಮ್ ।
ದೃಷ್ಟ್ವಾ ತಂ ತಸ್ಯ ವಕ್ತ್ರೇ ಪ್ರಕಟಯದನಿಲಾಂಶೋ ಯತೀಂದ್ರೋಽತಿವಾಗ್ಮೀ
ಮಧ್ವೋ ಮಾನ್ಯಾರ್ಥವಾಕ್ಯೋ ಮಧುಮಥನಪದಂ ಮಾನಸೇ ಮಾನಯಾನಃ ॥
– ಅಣುಜಯತೀರ್ಥವಿಜಯ (ಶ್ಲೋ. ೪)

ಸಾಯಲಿ ಎಂದಿತ್ತೇ ಹೊರತು, ಅದು ಮತ್ತೆ ಬದುಕಬಾರದು ಎಂದೇನೂ ಇರಲಿಲ್ಲವಷ್ಟೆ! ಹೀಗೆ ವಿಪ್ರವಾಣಿಯನ್ನು ಸತ್ಯಗೊಳಿಸಿಯೂ ಎತ್ತನ್ನು ಬದುಕಿಸಿದ ಮಹಿಮೆ ಶ್ರೀಮದಾಚಾರ್ಯ-ರದಾಯಿತು. ಸ್ವತಃ ಅಮೃತರಾದ ಅವರಿಗೆ ಅದನ್ನು ಹಾಗೆ ಬದುಕಿಸಲು ದ್ವಾದಶಸ್ತೋತ್ರವಾಗಲಿ, ಅದರಿಂದ ಅಭಿಮಂತ್ರಿತವಾದ ಜಲದ ಪ್ರೋಕ್ಷಣೆಯಾಗಲಿ ಅವಶ್ಯಕವಾಗಿರಲಿಲ್ಲ. ಆದರೆ ಹಾಗೆ ಮಾಡುವ ಮೂಲಕ ಅವರು ದ್ವಾದಶಸ್ತೋತ್ರದ ಮಹಿಮೆಯನ್ನು ತೋರಿದರು. ಸತ್ತವರನ್ನು ಬದುಕಿಸುವ ಉಪಾಯವನ್ನು ಶಿಷ್ಯವೃಂದಕ್ಕೆ ಸಾರಿದರು.

ಹಾಗೆ ಸತ್ತ ಅದನ್ನು ಬದುಕಿಸುವ ಮೂಲಕ ಅದು ಮುಂದೆ ತಮ್ಮ ಗ್ರಂಥಗಳಿಗೆ ಟೀಕೆ ಬರೆಯುವುದೆಂಬ ತಮ್ಮ ಮಾತಿನಲ್ಲಿನ ಸತ್ಯತೆಯನ್ನು ಅವರು ಸ್ಫುಟಪಡಿಸಿದರು. ಈ ಘಟನೆ ಅಶ್ವತ್ಥಾಮರ ಬ್ರಹ್ಮಶಿರೋಸ್ತ್ರಕ್ಕೆ ಮೃತನಾದ ಪರೀಕ್ಷಿದ್ರಾಜನನ್ನು ಭಗವಂತನಾದ ಶ್ರೀಕೃಷ್ಣ ಮರಳಿ ಬದುಕಿಸಿದ ಭಾರತಭಾಗವತಗಳ ಪ್ರಸಂಗವನ್ನು ಜ್ಞಾಪಿಸುವಂತಿದೆ. ಹಾಗೆ ಮಾಡಿದ ಶ್ರೀಕೃಷ್ಣನು ಮೋಕ್ಷ ಕರುಣಿಸುವ ಭಗವಂತನಾದ ಶ್ರೀಹರಿಯಾದರೆ, ಹೀಗೆ ಮಾಡಿದ ಶ್ರೀಮಧ್ವರು ಮೋಕ್ಷ ಕೊಡಿಸುವ ಸಾಕ್ಷಾತ್ ಶ್ರೀವಾಯುದೇವರು. ಇಬ್ಬರೂ 'ಅಮೃತ'ರೆಂಬುದಾಗಿಯೇ ಶಾಸ್ತ್ರಗಳಿಂದ ಪ್ರತಿಪಾದಿತರು. ಅಲ್ಲಿ ಪರೀಕ್ಷಿದ್ರಾಜ ಬ್ರಹ್ಮಶಿರೋಸ್ತ್ರದಿಂದ ಮೃತನಾಗಿದ್ದರೆ, ಇಲ್ಲಿ ಎತ್ತು ಬ್ರಹ್ಮಶಾಪದಿಂದ ಮೃತವಾಗಿದ್ದಿತು. ಬ್ರಾಹ್ಮಣರ ಶಾಪ ಬ್ರಹ್ಮಶಿರೋಸ್ತ್ರವಿದ್ದಂತೆ ಎಂಬ ತತ್ತ್ವವೂ ಇಲ್ಲಿ ಸೂಚಿತವಾಗಿದೆ.

ಹಾಗೆ ಶಾಪಕೊಟ್ಟ ಅಸೂಯಾಪರರಾದ ಶಿಷ್ಯರ ಅಜ್ಞಾನದ ಬಗ್ಗೆಯೂ ಸಹ ಶ್ರೀಮದಾಚಾರ್ಯರಿಗೆ ಅನುಕಂಪ ಮೂಡಿತು. ಅವರಿಗೆ ಆ ವೃಷಭದ ಉತ್ತಮಯೋಗ್ಯತೆ-ಯನ್ನು ತಿಳಿಸಿ, ಅವರ ಮನೋದೋಷವನ್ನು ನಿವಾರಿಸಿ, ಅನುಗ್ರಹಿಸಬೇಕೆನ್ನಿಸಿತು. ಮಹಾತ್ಮರ ಸ್ವಭಾವವೇ ಅಂತಹುದು. ಅಜ್ಞಾನಿಗಳ ಬಗ್ಗೆ ಅನುಕಂಪ, ಕರುಣೆಗಳು ಅವರಿಗೆ ದೀಪಕ್ಕೆ ಬೆಳಕಿನಷ್ಟೇ ಸಹಜ. ಅವರಿಗೆ ಆದೇಶಿಸಿದರು – 'ಆ ಎತ್ತಿನ ಹೃದಯಕ್ಕೆ ನಿಮ್ಮ ಕಿವಿಯನ್ನಿಟ್ಟು ಆಲಿಸಿ'. ಕುತೂಹಲದಿಂದ ಅವರೆಲ್ಲ ಹಾಗೆ ಮಾಡಿದಾಗ ಉಂಟಾದ ಆಶ್ಚರ್ಯಕ್ಕೆ ಮಿತಿಯೇ ಇರಲಿಲ್ಲ! ಆ ಎತ್ತಿನ ಹೃದಯದಲ್ಲಿ ದ್ವಾದಶಸ್ತೋತ್ರದ ಗಾನ [೧]ನಡೆದಿತ್ತು. ಅಸೂಯೆ ತೊರೆದ ಅವರಿಗೆ ಅದರ ಬಗ್ಗೆಯೂ, ಅದಕ್ಕಿಂತ ಹೆಚ್ಚಾಗಿ ಅದನ್ನು ಹಾಗೆ ಉದ್ಧರಿಸಿದ ಶ್ರೀಮದಾಚಾರ್ಯರ ಬಗ್ಗೆಯೂ ಆದರಾತಿಶಯವು ಮೂಡಿತು.

ಶ್ರೀಕೃಷ್ಣ ಬದುಕಿಸಿದ ಪರೀಕ್ಷಿದ್ರಾಜ ಆ ಜನ್ಮದಲ್ಲೇ ಶ್ರೀಶುಕಾಚಾರ್ಯರ ಮುಖದಿಂದ ಶ್ರೀ-ಮದ್ಭಾಗವತಾಮೃತಪಾನವನ್ನು ಮಾಡಿ ವೈಕುಂಠಕ್ಕೆ ನಡೆದ. ಶ್ರೀಮಧ್ವರು ಬದುಕಿಸಿದ ಎತ್ತು

---

೧. ....ದ್ವಾದಶಸ್ತೋತ್ರಪಾಠಮ್ । ದೃಷ್ಟ್ವಾ ತಂ ತಸ್ಯ ವಕ್ತ್ರೇ ಪ್ರಕಟಯದನಿಲಾಂಶಃ ....
– ಅಣುಜಯತೀರ್ಥವಿಜಯ (ಶ್ಲೋ. ೪)

ತತ್ಕಾಲೇ ಸೂಚನಾರ್ಥಂ ವೃಷಭವರಮುಖಾತ್ ದ್ವಾದಶಸ್ತೋತ್ರಪಾಠಂ
ಶಿಷ್ಯಾನಾಶ್ರಾವಯತ್ ........ । – ಶ್ರೀಜಯಾರ್ಯಸ್ತುತಿಃ (ಶ್ಲೋ.೩.)

ಮುಂದಿನ ಜನ್ಮದಲ್ಲಿ ಶ್ರೀಜಯತೀರ್ಥರಾಗಿ ಶುಕದಂತೆ ಗುರುಮುಖದಿಂದ ಮಧ್ವಶಾಸ್ತ್ರಾಮೃತ-ವನ್ನು ಮಾಡಿ ನ್ಯಾಯಸುಧೆಯನ್ನು ರಚಿಸಿ, ಸಜ್ಜನರೆಲ್ಲ ಮುಕ್ತಿಗೆ ಕರೆದೊಯ್ಯುವ ಜ್ಞಾನಪಥವನ್ನು ವಿಸ್ತರಿಸಿತು.

ಆ ಕಾಲದಲ್ಲಿ ಈ ಘಟನೆ ಸಹಜವಾಗಿಯೇ ಜನಜನಿತವಾಗಿತ್ತು. ಪ್ರಾಯಃ ಇದನ್ನು ಶ್ರೀಅಕ್ಷೋಭ್ಯತೀರ್ಥರು ಕಣ್ಣಾರೆ ಕಂಡವರೂ ಆಗಿದ್ದಿರಬಹುದು. ಮುಂದೆ ಆಚಾರ್ಯರು ಹಾಗೆ ತಿಳಿಸಿದ ಎತ್ತೇ ಈ ವ್ಯಕ್ತಿಯೋ ಎಂಬ ಅರ್ಥದಲ್ಲೂ ಈ ಮಾತಿನ (**'ಕಿಂ ಪಶುಃ ಪೂರ್ವದೇಹೇ'** ಆಚಾರ್ಯರು ವ್ಯಾಖ್ಯಾನ ಬರೆಯುವುದೆಂದು ತಿಳಿಸಿದ್ದ ಆ ಪಶುವು ನೀನೇಯೋ) ಅರ್ಥ ತೆರೆದುಕೊಳ್ಳುತ್ತದೆ. ಶ್ರೀಮದಾಚಾರ್ಯರು ಬೃಹದಾರಣ್ಯಕೋಪ-ನಿಷದ್ಭಾಷ್ಯದಲ್ಲಿ ಗೋವುಗಳಲ್ಲಿ ದೇವಗೋ, ಮನುಷ್ಯಗೋ ಎಂಬ ಪ್ರಭೇದವಿದ್ದು ಅವುಗಳಲ್ಲಿ ದೇವಗೋ ಎಂದರೆ ತತ್ತ್ವಜ್ಞಾನಿ ಎಂದರ್ಥ ಎಂದು ತಿಳಿಸಿರುವರು. ಅದರಂತೆ ಇಲ್ಲಿ ಪಶು ಎಂದರೆ ದೇವಪಶು ಎಂದರ್ಥವಾಗಿ ನೀನು ದೇವಗೋ ಆಗಿದ್ದವನೇ ಎಂಬ ವಿಶಿಷ್ಟವಾದ ಅರ್ಥವೂ ಸೂಚಿತವಾಗುವುದು ಎಂದೂ ತಿಳಿಯಬಹುದು.

## ಧೋಂಡೂ ರಘುನಾಥರಿಗೆ ಜ್ಞಾನೋದಯ

ಇತ್ತ ಆ ಮಾತು ಕಿವಿಗೆ ಬೀಳುತ್ತಿದ್ದಂತೆಯೇ ಧೋಂಡೂ ರಘುನಾಥರಿಗಾದ ಅನುಭವ ಹೊಸ ಪ್ರಪಂಚವನ್ನೇ ತೆರೆದಿಟ್ಟಿತು. ಅವರ ಪಿಪಾಸೆ ತಣಿಯಿತು; ಆದರೆ ಜಿಜ್ಞಾಸೆ ಮೂಡಿತು.

ತನ್ನನ್ನು ಹಾಗೆ ಕೇಳುವ ಈ ವ್ಯಕ್ತಿ ಯಾರು? ಇದರ ಹಿನ್ನೆಲೆ ಏನು? ಅವರ ಸ್ಮೃತಿಪಟಲದಲ್ಲಿ ಜನ್ಮಾಂತರದ ಘಟನೆ ಮೂಡತೊಡಗಿತು[೧]. ಹೌದು, ನಾನು ಎತ್ತಾಗಿದ್ದಿದು ನಿಜ; ಆಗ ಈ ರೀತಿ ನೀರು ಕುಡಿಯುತ್ತಿದ್ದುದೂ ನಿಜ; ಆದರೆ ಅದಕ್ಕಿಂತ ಹೆಚ್ಚಾಗಿ ಕಿವಿಗಳಿಂದ ಶ್ರೀಮದಾಚಾರ್ಯರ ಅಮೃತೋಪಮಶಾಸ್ತ್ರವನ್ನು ಪಾನಮಾಡುತ್ತಿದ್ದುದೂ ನಿಜ. ಆಚಾರ್ಯರ ವಿಶ್ವಮನೋಹರವಾದ ಅದ್ಭುತ ಆಕೃತಿ, ಅವರ ಅನುಪಮ ಶಾಸ್ತ್ರಗ್ರಂಥಗಳ ಪ್ರವಚನ, ಬೆನ್ನಮೇಲೆ ಅವುಗಳನ್ನು ಹೊತ್ತು ತಿರುಗುತ್ತಿದ್ದ ಸಾರ್ಥಕಜೀವನ – ಒಂದೇ, ಎರಡೇ! ಅಲ್ಲಿಯ ಸಮಗ್ರಚಿತ್ರ ಕಣ್ಣಿಗೆ ಕಟ್ಟಿತು. ಮನಸ್ಸನ್ನು ಕವಿದಿದ್ದ ಅಜ್ಞಾನದ ತೆರೆ ಸರಿಯಿತು. ತನ್ನ ರಾಜ್ಯ ಅಂತಸ್ತು, ಅಧಿಕಾರ, ಇಬ್ಬರು ಪತ್ನಿಯರು, ಅಪಾರ ಸಂಪತ್ತು, ಧನಕನಕಾದಿವೈಭವ, ಅನೆಕುದುರೆಗಳ ಸಂಭ್ರಮ ಎಲ್ಲವೂ ತೃಣಪ್ರಾಯ ಎಂಬ ಸತ್ಯ ಗೋಚರಿಸಿತು. ತಾವು ಕೇಳಿದ್ದ ಆ ಅದ್ಭುತ ಮಧ್ವಶಾಸ್ತ್ರವನ್ನು ಮತ್ತೆ ಕೇಳುವ ಕಾತರ ಮನಸ್ಸನ್ನು ಆವರಿಸಿತು; ಅಕ್ಷೋಭ್ಯತೀರ್ಥರ ಬಳಿಗೆ ಧಾವಿಸಿದರು; ದೇಹವನ್ನು ಅವರ ಮುಂದೆ ಉರುಳಿಸಿದರು; ಶಿರಸ್ಸನ್ನು ಅವರ ಪಾದಗಳ ಮೇಲೆ ಇರಿಸಿದರು. ಅವರ

---

೧. ಸಸ್ಮಾರ ಪೂರ್ವಾನುಭೂತಂ ದಶಹೃದಯನಿಯೋಗಂ ಜನ್ಮ ಗವ್ಯಂ ಚ ಭೂತಮ್ ॥

– ವ್ಯಾ.ಜ.ವಿ. (೪/೮)

ಬಾಯಿಂದ ಪ್ರಾರ್ಥನೆ ಹೊರಹೊಮ್ಮಿತು. 'ನನ್ನನ್ನು ತಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಬೇಕು. ಶ್ರೀಮಧ್ವಶಾಸ್ತ್ರವನ್ನು ಉಪದೇಶಿಸಿ ನನ್ನನ್ನು ಪುನೀತನನ್ನಾಗಿಸಬೇಕು'.

ಒಂದು ಮಾತಿನಿಂದ ಹೀಗೆ ಜೀವನ ಪರಿವರ್ತನೆಗೊಳ್ಳುವುದು ಇತಿಹಾಸಪುರಾಣ-ಪ್ರಪಂಚವನ್ನು ಬಲ್ಲವರಿಗೆ ಹೊಸತೇನೂ ಅಲ್ಲ. ಹರಿವಂಶದಲ್ಲಿ ಬ್ರಹ್ಮದತ್ತನೆಂಬ ರಾಜನಾಗಿ ಜನಿಸಿದ್ದ ಪಿತೃವರ್ತಿಯೆಂಬವನು ತನ್ನ ಬಳಿಗೆ ಬಂದ ಬ್ರಾಹ್ಮಣನೊಬ್ಬನು ಕೊಟ್ಟ ಪತ್ರವನ್ನು ಓದುತ್ತಿದ್ದಂತೆಯೇ ತನ್ನ ಪೂರ್ವಜನ್ಮಸ್ಮರಣೆಯನ್ನು ಪಡೆದು ವಿರಕ್ತನಾಗಿ ಸದ್ಗತಿ ಪಡೆದ ಪ್ರಸಂಗ [1]ಬಂದಿದೆ. ಅಲ್ಲಿ ಎರಡು ಶ್ಲೋಕಗಳ ಶ್ರವಣದಿಂದ ಪೂರ್ವಜನ್ಮಸ್ಮೃತಿ ಒದಗಿದರೆ, ಕೇವಲ ಒಂದು ವಾಕ್ಯದಿಂದ ಅಂತಹ ಪ್ರಸಂಗ ನಡೆದಿದೆ ಎಂಬುದು ವಿಶೇಷ. ಅನಂತರ ಕಾಲದಲ್ಲಿ ನಿರಕ್ಷರಕುಕ್ಷಿ ಎನಿಸಿದ್ದ ದಾಸಪ್ಪ ದೈವಾನುಗ್ರಹದಿಂದ ಕ್ಷಣಮಾತ್ರದಲ್ಲಿ ವಿಜಯದಾಸರು ಎನಿಸಿದ ಇತಿಹಾಸವನ್ನು ಇಲ್ಲಿ ಗಮನಿಸಬಹುದು.

ತಮ್ಮ ಚರಣಗಳಿಗೆರಗಿದ ರಘುನಾಥರಾಯರನ್ನು ಶ್ರೀಅಕ್ಷೋಭ್ಯತೀರ್ಥರು ಎರಡೂ ಕೈಗಳಿಂದ ಮೇಲೆತ್ತಿ ಸ್ವಾಗತಿಸಿದರು. ವೇದೋಕ್ತ ಆಶೀರ್ವಚನಗಳಿಂದ ಹರಸಿದರು. ಪ್ರೀತಿಯಿಂದ ನುಡಿದರು – 'ರಘುನಾಥ ! ನಿನಗೆ ಮಧ್ವಶಾಸ್ತ್ರವನ್ನು ಉಪದೇಶಿಸುವುದಷ್ಟೇ ಅಲ್ಲ, ಆ ಮಧ್ವರ ವೇದಾಂತಸಾಮ್ರಾಜ್ಯಕ್ಕೆ ಅಧಿಪತಿಯನ್ನಾಗಿ ಪಟ್ಟಾಭಿಷೇಕ ಮಾಡುವೆವು. ಸನ್ಯಾಸದೀಕ್ಷೆಗೆ ಸಿದ್ಧನಾಗು'.

ರಘುನಾಥರಾಯರು ಅವಾಕ್ಕಾದರು. 'ತಮಗೆ ಬೇಕಿರುವುದು ಶಾಸ್ತ್ರವೇ ಹೊರತು ಪೀಠವಲ್ಲ. ತಮ್ಮ ಗುರಿ ಜ್ಞಾನವೇ ಹೊರತು ಅಧಿಕಾರವಲ್ಲ. ಆ ಬಗ್ಗೆ ನನಗೆ ಅಪೇಕ್ಷೆಯೂ ಇಲ್ಲ, ಅರ್ಹತೆಯಂತೂ ಮೊದಲೇ ಇಲ್ಲ. [2]ಈವರೆಗೆ ಶಾಸ್ತ್ರದ ಗಂಧವೂ ಇಲ್ಲದೆ ಬೆಳೆದವನು ನಾನು. ಅಂತಹ ನಾನು ಗುರುಪೀಠವನ್ನೇರಿ ಶಾಸ್ತ್ರೋಪದೇಶಕನಾಗುವುದು ಎಂತು? ನನಗೆ ಶಾಸ್ತ್ರಾಭ್ಯಾಸವೊಂದೇ ಗುರಿ. ಅದನ್ನು ಕರುಣಿಸಿದರೆ ನಾನು ಧನ್ಯ. ಸನ್ಯಾಸ ನನಗೆ ಬೇಕೇ ಬೇಕು. ಆದರೆ ಪೀಠಾಧಿಪತ್ಯ ನನ್ನಿಂದಾಗದು[3]. ನಾನೆಲ್ಲಿ? ಶ್ರೀರಾಮಪೂಜೆ, ಶ್ರೀವೇದಾಂತ-ಸಾಮ್ರಾಜ್ಯಾಧಿಪತ್ಯವೆಲ್ಲಿ?'.

---

೧. ಸಪ್ತವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ ।
ಚಕ್ರವಾಕಾಃ ಶರದ್ವೀಪೇ ಹಂಸಾಃ ಸರಸಿ ಮಾನಸೇ ॥
ತೇಽಭಿಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ ।
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ಕಿಮವಸೀದಥ ॥
– ಹರಿವಂಶ (ಹರಿವಂಶಪರ್ವ, ಅ.೨೪, ಶ್ಲೋ. ೨೦, ೨೧)

೨. ವ್ಯಾಜಪ್ರೇ ನ ಮಯಾ ಕಿಮಪ್ಯಧಿಗತಂ ಸಂಧ್ಯಾದಿಕಂ ವೇತಿ ಯಃ – ಶ್ರೀಟೀಕಾಕೃತ್ಪಾದಾಷ್ಟಕ (ಶ್ಲೋ.೫)

೩. ಯತಿವರ ತವ ಸೇವಾಮೇವ ಮಾ ಸಂವಿಧಾತುಂ ಪ್ರವಣಮನುಗೃಹಾಣಾಂತ್ಯಾಶ್ರಮಂ ದೇಹಿ ಶುದ್ಧಮ್ ।
ಕ್ವ ರಘುಪತಿಸೇವಾ ಮೂಢಬುದ್ಧೇರ್ನಿತಾಂತಂ ಕ್ವ ನಿಗಮಪಥಸಾಮ್ರಾಜ್ಯಾಧಿಪತ್ಯಂ ಕೃಶಸ್ಯ ॥
– ವ್ಯಾ.ಜ.ವಿ.(೪/೧೯)

ಅಕ್ಷೋಭ್ಯತೀರ್ಥರು ಮಂದಹಾಸದಿಂದ ಉತ್ತರಿಸಿದರು –'ಮಗು ! ನಿನಗೆ ಶಾಸ್ತ್ರ ಬೇಕಿದೆ ಎಂಬ ಕಾರಣಕ್ಕಾಗಿಯೇ ನನಗೆ ಪೀಠ ಕೊಡಬೇಕೆನ್ನಿಸಿದೆ. ಶಾಸ್ತ್ರದ ಬಗ್ಗೆ ಒಲವಿದ್ದವರಿಗೆ ಮಾತ್ರವೇ ಪೀಠವೇರುವ ಅರ್ಹತೆ. ಶಾಸ್ತ್ರಬೇಕಿಲ್ಲದ ಪೀಠಕ್ಕೆ ಕುಳಿತವರಿಂದ ಪೀಠವೂ ಉಳಿಯದು, ಶಾಸ್ತ್ರವೂ ಉಳಿಯದು. ನೀನು ಶಾಸ್ತ್ರ ಓದುವವನು ಮಾತ್ರವಾಗದೆ, ಶಾಸ್ತ್ರ ಪ್ರವಚನಮಾಡುವ, ಶಾಸ್ತ್ರಗ್ರಂಥಗಳನ್ನು ಪ್ರಸಾರಮಾಡುವ ಮಹಾತ್ಮನೆನ್ನಿಸುವಿ. ಅಂತಹ ಅಪೂರ್ವಸಾಮರ್ಥ್ಯ ನಿನ್ನಲ್ಲಿದೆ. ಇದು ನಮ್ಮ ಅಪೇಕ್ಷೆ ಮಾತ್ರವಲ್ಲದೆ, ದೈವಸಂಕಲ್ಪವೂ ಆಗಿದೆ'. ರಘುನಾಥರಾಯ ಮತ್ತೆ ನುಡಿದ – 'ಅದು ಹಾಗೆ ದೈವಸಂಕಲ್ಪವಾಗಿದ್ದಲ್ಲಿ ಅದಕ್ಕೆ ನಾನು ಸಿದ್ಧ. ಆದರೆ ಅದನ್ನು ನಾನು ತಿಳಿಯುವ ಬಗೆಯೆಂತು?'. ಅಕ್ಷೋಭ್ಯತೀರ್ಥರು ನುಡಿದರು – 'ಇಂದಿನ ಮಟ್ಟಿಗೆ ನೀನು ನಮ್ಮ ಬಳಿಯೇ ಇರು. ನಿನಗೂ ಸೂಚನೆಯಾದೀತು. ನನಗೆ ಸೂಚನೆಯಿತ್ತ ಭಗವಂತ ನಿನಗೂ ಹಾಗೆ ಸೂಚನೆ ನೀಡಿಯಾನು'. ಅದರಂತೆ ಅಂದು ರಾತ್ರಿ ಸ್ವಪ್ನದಲ್ಲಿ ಅಂತಹ ಸೂಚನೆ ಶ್ರೀವಾಯುದೇವರಿಂದ ಅವರಿಗೆ ದೊರೆತೂ ಬಿಟ್ಟಿತು. 'ನೀನು ಸಂನ್ಯಾಸ ಸ್ವೀಕರಿಸಿ, ಶ್ರೀರಾಮನನ್ನು ಪೂಜಿಸು. ವಿದ್ವದಗ್ರಗಣ್ಯನೂ, ಸರ್ವಜ್ಞಾನಿಗಳಿಗೆ ಆಶ್ರಯನೂ ಆಗುವಿ'[೧]. ಗುರುಗಳಿಗೆ ತಮ್ಮ ಸರ್ವಸ್ವವನ್ನೂ ಒಪ್ಪಿಸಿದ್ದ ಅವರು ಅವರ ಅಪೇಕ್ಷೆಗೆ ಮಣಿದರು. ಸಂನ್ಯಾಸಕ್ಕೆ ಅಣಿಯಾದರು. ಈ ಪ್ರಸಂಗವು ಶ್ರೀಸುಧೀಂದ್ರತೀರ್ಥರ ಆದೇಶದ ಬಗ್ಗೆ ಚಿಂತನೆಗೆ ತೊಡಗಿದ ವೆಂಕಟನಾಥರಿಗೆ ವಿದ್ಯಾಲಕ್ಷ್ಮಿ ಕಾಣಿಸಿಕೊಂಡು ಸನ್ಯಾಸ ಸ್ವೀಕರಿಸಲು ಆದೇಶವಿತ್ತ ಘಟನೆಯಂತಿದೆ. ಅದರಂತೆ ವೆಂಕಟನಾಥರು ಶ್ರೀರಾಘವೇಂದ್ರ ಸ್ವಾಮಿಗಳೆನ್ನಿಸಿದ್ದು ಇತಿಹಾಸ. ಆಗೊಮ್ಮೆ ಕೇಳಿದರು – 'ನಿನ್ನ ಅಪೇಕ್ಷೆ, ನಮ್ಮ ಸಂಕಲ್ಪ ಹಾಗೂ ದೈವಾನುಗ್ರಹ ಮೂರೂ ಸೇರಿದವು. ಆದರೆ ನಿಮ್ಮ ತಂದೆ ಈ ಬಗ್ಗೆ ನನ್ನನ್ನು ಪ್ರಶ್ನಿಸಿದರೆ ಏನು ಹೇಳುವಿ?' ರಘುನಾಥರಾಯರ ಉತ್ತರ ಸಿದ್ಧವಾಗಿತ್ತು. 'ಇದು ನಾನಾಗಿಯೇ ಬಯಸಿ ಬಯಸಿ ಪಡೆದ ಸಂನ್ಯಾಸ; ಅವರಿಗೂ ನಾನು ಹಾಗೆಯೇ ತಿಳಿಸುವೆ'. ಇಪ್ಪತ್ತರ ತರುಣನಿಗೆ ಎಪ್ಪತ್ತು ಮೀರಿದ ಗುರುಗಳು ದೀಕ್ಷೆ ನೀಡಿದರು. ವಿಧ್ಯುಕ್ತವಾಗಿ ಸಂನ್ಯಾಸ ನೀಡುತ್ತಾ ಶ್ರೀಅಕ್ಷೋಭ್ಯತೀರ್ಥರು ತುಂಬುಹೃದಯದಿಂದ ನುಡಿದರು – ''ಇನ್ನ ಮೇಲೆ ನೀವು ಶ್ರೀಜಯತೀರ್ಥರು[೨]. ನಿಮ್ಮಿಂದ 'ಜಯ' ಶಬ್ದವಾಚ್ಯವಾದ ಮಹಾಭಾರತಾದಿಗಳ ವಿಚಾರಕ್ಕೆ ಅಣಿಮಾಡುವ ಶಾಸ್ತ್ರಗ್ರಂಥಗಳು

---

೧. ತದನು ಸಪದಿ ರಾತ್ರೌ ಸ್ವಪ್ನ ಆಹಾಥ ವಾಯು-
ರ್ನೃಪತನಯ ಭಜಸ್ವಾಂತ್ಯಾಶ್ರಮಂ ತ್ವಂ ಮನೋಜ್ಞಮ್ ।
ಕುರು ರಘುಪತಿಪೂಜಾಂ ದುರ್ಲಭಾಂ ದೇಹಭಾಜಾಂ
ಭವಸಿ ಬುಧಶರಣ್ಯಃ ಸರ್ವವಿಪ್ರಾಗ್ರಗಣ್ಯಃ ॥ – ವ್ಯಾ.ಜ.ವಿ. (೪/೨೨)

೨. ಇತ್ಥಂ ಸಾದೀಶ್ವರೋಕ್ತ್ಯೋ ರಘುಪತಿಭಜನೇ ಯೋಗ್ಯ ಇತ್ಯೇವ ಬುದ್ಧಿಂ
ಕೃತ್ವಾ ಪ್ರಾದಾದ್ಯತಿತ್ವಂ ಗುರುವಚನಮಸೌ ಸಂಸ್ಮರನ್ ಯೋಗಿವರ್ಯಃ ।
ಶಾಸ್ತ್ರಂ ಯದ್ವಕ್ತ್ರಪದ್ಮೋದ್ಗಲಿತಮಶೃಣುಯಾದ್ಯೋ ಜಯೇತ್ ಸರ್ವವಾದೀ-
ನಿತ್ಥಂ ಕಾಲತ್ರಯಜ್ಞೋ ವ್ಯಧಿತ ಜಯಸುತೀರ್ಥೇತಿ ಸಂಜ್ಞಾಂ ಸ ತಸ್ಯ ॥ – ಅ.ಜ.ವಿ. (ಶ್ಲೋ. ೯)

ರಚಿತವಾಗಲಿ. ವಾದಿಜಯ[1] ನಿಮಗೆ ಸಿದ್ಧಿಸಲಿ. ಓದಿದವರಿಗೂ ವಾದಿಜಯ, ಸಂಸಾರಜಯ-ಗಳನ್ನು ಸಾಧಿಸುವ ಸಾಮರ್ಥ್ಯವನ್ನು ನೀಡಬಲ್ಲ ಗ್ರಂಥರತ್ನಗಳು ನಿಮ್ಮಿಂದ ಬರಲಿ''. ಗ್ರಂಥಪ್ರಸಾರದ ಆದೇಶ ಅತ್ಯಂತ ಪ್ರಿಯವೆನ್ನಿಸಿತ್ತು. ಬೆನ್ನ ಮೇಲೆ ಅವುಗಳ ಭಾರವನ್ನು ಹೊತ್ತಿದ್ದ ಅವರಿಗೆ ಅವುಗಳ ಅರ್ಥಸಾರವನ್ನು ಬರೆಯುವ ಅವಕಾಶ ಹಾಗೆ ಬರುವುದೆಂದು ತಿಳಿದು ಉಂಟಾದ ಆನಂದಕ್ಕೆ ಪಾರವೇ ಇರಲಿಲ್ಲ.

ಶ್ರೀಜಯತೀರ್ಥರ ಜೀವನದ ಈ ಘಟ್ಟ ಅತ್ಯಂತ ಮಹತ್ತ್ವಪೂರ್ಣವಾದುದು. ಪುನ-ರ್ಜನ್ಮದ ಸಮಸ್ಯೆಗೆ ಅತ್ಯಂತ ಖಚಿತ ಉತ್ತರ ನೀಡುವ ಅಪೂರ್ವಘಟನೆಯಾಗಿಯೂ ಇದಕ್ಕೆ ತುಂಬಾ ಮಹತ್ತ್ವವಿದೆ. ಈ ಜನ್ಮದಲ್ಲಿ ಅವರಿಗೆ ಯಾವ ರೀತಿಯಲ್ಲೂ ಶಾಸ್ತ್ರದ ಸಂಪರ್ಕವೇ ಇರಲಿಲ್ಲ. ಪಾಂಡಿತ್ಯವಂತೂ ಕನಸಿನ ಮಾತು. ಅವರು ಹುಟ್ಟಿದ ಮನೆತನವೂ ಅಂತಹುದೇ. ಶಾಸ್ತ್ರ ಸಂಪರ್ಕದ ಬದಲು ಶಸ್ತ್ರ ಹಿಡಿದೇ ಬದುಕಿದ ವಿಚಿತ್ರ ಪರಂಪರೆ. ಮಧ್ಯೆ ಮಧ್ಯೆ ಪರಕೀಯರ ಆಕ್ರಮಣದಿಂದಾಗಿ ಸಮರಭೀತಿ. ಅಂತಹವರು ಮುಂದೆ ಇಡೀ ಪರಂಪರೆಗೆ ಮಾನ್ಯರಾದ ಮಹಾಗುರುಗಳೆನ್ನಿಸಿದ್ದು, ವಿದ್ವತ್ತಿನ ಮಹಾಸಾಗರವೆಂದು ಖ್ಯಾತರಾಗಿದ್ದು ಇತಿಹಾಸ. ಪಂಡಿತ ಮನೆತನದಲ್ಲಿ ಜನಿಸಿದ್ದಲ್ಲಿ ಸ್ವಲ್ಪವಾದರೂ ಈ ಜನ್ಮದ ಸಾಧನೆಯ ಪರಿಶ್ರಮದ ಫಲ ಎನ್ನಬಹುದಿತ್ತು. ಅದರ ಬದಲು ಭಗವಂತ ಈ ಬಗೆಯ ಜೀವನವನ್ನು ಅವರಿಗೆ ಕರುಣಿಸಿದ್ದು ಜಗತ್ತಿನ ಮೇಲಿನ ಕೃಪೆಯಿಂದಲೇ ಎಂದು ಭಾವಿಸಬಹುದು. [2]ಇದರಿಂದಾಗಿ ಪುನರ್ಜನ್ಮದ ನಂಬಿಕೆಯೊಂದಿಗೆ ಭಗವದನುಗ್ರಹದಿಂದ ಯಾವುದು ತಾನೆ ದುರ್ಲಭ ಎಂಬ ಶಾಸ್ತ್ರತತ್ತ್ವವೂ ನಿರೂಪಿತವಾಗುವುದು. ಶ್ರೀಜಯತೀರ್ಥರು ಮುಂದೆ ನ್ಯಾಯಸುಧೆಯಲ್ಲಿ 'ನನಗೆ ವ್ಯಾಕರಣ ಗೊತ್ತಿಲ್ಲ; ಮೀಮಾಂಸೆ ತಿಳಿದಿಲ್ಲ; ತರ್ಕದ ಜ್ಞಾನವಿಲ್ಲ; ತಿಳಿಯಬೇಕಾದ ಯಾವುದನ್ನೂ ನಾನು ತಿಳಿದಿಲ್ಲ' ಎಂದು ನುಡಿದಿರುವುದು ಅವರ

---

೧. ಸದಸಿ ವಿಜಯತೇಽಸದ್ವಾದಿದುರ್ವಾದಿಸಂಘಾನ್
ಷಡಪಿ ಚ ಹೃದಯಾಂತಃ ಕಾಮರೋಷಾದಿಶತ್ರೂನ್ ।
ಭುವಿ ವಿತತಸುಕೀರ್ತಿಃ ಸ್ಯಾದಿತಿ ಸ್ವೇ ವಿನೇಯೇ
ವ್ಯತನುತ ಜಯನಾಮಾಕ್ಷೋಭ್ಯತೀರ್ಥೋ ಯತೀಂದ್ರಃ ॥ —ವ್ಯಾ.ಜ.ವಿ. ೪/೩.೨
ಗುರುಪ್ರದತ್ತಂ ಜಯತೀರ್ಥನಾಮ ತಸ್ಮೈ ಯದಾಸೀದನುರೂಪಮೇಷಃ ।
ಜಯೋರುಪಾತ್ರಂ ಜಯಕೃಚ್ಚ ಮಾಧ್ವಂ ತಟ್ಟೀಕಯಾಽಶೇಷವಿದಾಂ ಹಿ ತೀರ್ಥಮ್ ॥
—ಛ. ಜಯತೀರ್ಥವಿಜಯ (೩./೧೮)
ಯದೀಯಾನುಪಜೀವ್ಯೈವ ಗ್ರಂಥಾನ್ ಸುರತರೂನಿವ ।
ಸರ್ವೇಽಪಿ ಸಜ್ಜನಾಃ ಸರ್ವವಾದೀಂದ್ರವಿಜಯಾದಿಕಮ್ ॥
ಲೌಕಿಕೀಂ ಮಹತೀಂ ಭೂತೀಂ ವೈದಿಕೀಂ ಚಾಮೃತಾದಿಕಮ್ ।
ಆಪ್ನುವಂತಿ ಮಹಾಭಾಗಾ ನೂನಂ ದೇವಾಧಿರಾಡಸೌ ॥ ಛ.ಜ.ವಿ. (೫/೨೭,೨೮)

೨. ಭೂತ್ವಾ ಸಾದೀಶಗೇಹೇ ಪ್ರಕಟಯಿತುಮಸೌ ಸೂಕ್ಷ್ಮರೂಪಾಂ ಸ್ವಬುದ್ಧಿಂ
ಜಾತೇ ವಿದ್ವದ್ಗೃಹೇ ನ ಪ್ರಭವತಿ ನಿಜಸದ್ಬುದ್ಧಿಕೀರ್ತಿಪ್ರಕಾಶಃ । —ಅಣುಜಯತೀರ್ಥವಿಜಯ (ಶ್ಲೋ. ೫)

ಪೂರ್ವಜನ್ಮಕ್ಕೆ ಸಂಪೂರ್ಣವಾಗಿ ಅನ್ವಯಿಸುವ [೧]ಮಾತು. ಮುಂದೆ ಅವರು ವಿಶ್ವಮಾನ್ಯ-ರಾದದ್ದು ಮಾತ್ರ ಅವರೇ ತಿಳಿಸಿರುವಂತೆ ಶ್ರೀಪೂರ್ಣಪ್ರಜ್ಞರ ಪರಮಕಾರುಣ್ಯದ ಫಲಶ್ರುತಿ.

ಅವರ ವೈರಾಗ್ಯದ ಪರಿಯೂ ಅತ್ಯದ್ಭುತವಾದದ್ದು. ಅಪಾರವಾತ್ಸಲ್ಯದ ಖನಿಗಳೆನ್ನಿಸಿದ ತಂದೆ-ತಾಯಿಗಳು, ಮಮತೆ ತೋರುವ ಬಂಧುವರ್ಗ, ಸುರಸುಂದರಿಯರಾದ ಇಬ್ಬರು ಪತ್ನಿಯರು, ತುಂಬು ತಾರುಣ್ಯ, ಧನಕನಕಗಳ ಅಪಾರ ಸಂಪತ್ತು, ಇವೆಲ್ಲವನ್ನು ಕ್ಷಣಾರ್ಧದಲ್ಲಿ ತ್ಯಜಿಸುವ ವಿರಕ್ತಿ ಸಾಧನೆಯ ಅದ್ಭುತಗಳಲ್ಲೊಂದು. ನಿಜಕ್ಕೂ ಅತ್ಯಂತ ಆದರ್ಶಪ್ರಾಯವಾದ ವೈರಾಗ್ಯ. ಹನುಮಂತನ ವೈರಾಗ್ಯವನ್ನು ಸ್ಮರಣೆಗೆ ತರುವ ಅಪೂರ್ವತೆ[೨] ಇವರದು. '**ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ**' (ವಿಷಯಚಿಂತನೆಯನ್ನು ತೊರೆದು ವಿಷ್ಣುಪಾದದ ಚಿಂತನೆಯಲ್ಲಿ ಮನಸ್ಸನ್ನು ತೊಡಗಿಸಿರಿ) ಎಂಬ ಶ್ರೀಮದಾಚಾರ್ಯರ ಸಂದೇಶವನ್ನು ಅವರ ಬಾಯಿಂದಲೇ ಕೇಳಿದ್ದ ಅವರಿಗೆ ಇಂತಹ ವೈರಾಗ್ಯ ಬಂದಿದ್ದು ಮಾತ್ರ ತೀರ ಸಹಜ.

## ಭೋಗ ತೊರೆದ ಭೋಗೀಶ್ವರ

ಧೋಂಡೂ ರಘುನಾಥರಾಯರು ಹೀಗೆ ಶ್ರೀಜಯತೀರ್ಥರಾದ ವಿಚಾರ ಎಲ್ಲೆಡೆ ಹರಡಿತು. ಅದನ್ನು ಕೇಳಿದ ತಂದೆ ಧುಂಡಿರಾಜನಂತೂ ಹತಾಶನಾದ. ಮಗನನ್ನು ಅಧಿಕಾರ-ಪೀಠದಲ್ಲಿ ನೋಡಬಯಸಿದ್ದ ಆತನಿಗೆ, ಅವರೀಗ ವೇದಾಂತಪೀಠವನ್ನು ಅಲಂಕರಿಸುವ ವಾರ್ತೆ ಕರ್ಣಕಠೋರವೆನ್ನಿಸಿತು. ಹತಾಶೆ ತಾಪವಾಗಿ ಕೋಪದಲ್ಲಿ ಪರ್ಯವಸಾನಗೊಂಡಿತು. ಪರಿವಾರಸಮೇತನಾಗಿ ಶ್ರೀಅಕ್ಷೋಭ್ಯತೀರ್ಥರೆಡೆಗೆ ನಡೆದ; ಅವರನ್ನು ಅವಾಚ್ಯಶಬ್ದಗಳಿಂದ ನಿಂದಿಸತೊಡಗಿದ. ಪುತ್ರಮೋಹ ಯತಿದ್ರೋಹದತ್ತ ಎಳೆದೊಯ್ದಿತು. ಅವರ ವಿವರಣೆಯನ್ನು ಕೇಳುವ ತಾಳ್ಮೆಯೂ ಅವನಿಗಿರಲಿಲ್ಲ. ಅದು ಗುರುಗಳ ಒತ್ತಾಯವಲ್ಲ; ತನ್ನ ಒತ್ತಾಸೆಯ ಫಲ ಎಂಬ ಮಗನ ಮಾತೂ ಆತನ ಕಿವಿಗೆ ಬೀಳದಾಯಿತು. ಶ್ರೀಅಕ್ಷೋಭ್ಯತೀರ್ಥರನ್ನು ದಂಡಿಸುವ ಪ್ರಯತ್ನಕ್ಕೂ ಆತ ತೊಡಗಿದ. ಅವರು ಶಾಂತರಾಗಿ ಉತ್ತರಿಸಿದರು: 'ಬೇಕಿದ್ದರೆ ನಿನ್ನ ಮಗನನ್ನು ಮನೆಗೆ ಕರೆದೊಯ್ಯಬಹುದು'. ಅವರಿಗೆ ತಿಳಿದಿತ್ತು. ದೈವಸಂಕಲ್ಪದ ಮುಂದೆ ಇವನ ಕೂಗಾಟಕ್ಕೆ ಯಾವ ಬೆಲೆಯೂ ಇಲ್ಲ ಎಂದು. ಅವನಿಗೆ ಹೇಳಿ ತಿಳಿಸುವುದಕ್ಕಿಂತ ಆತನ ಮಗನ ಮಹಿಮೆಯನ್ನು ಕಣ್ಣಾರೆ ಕಾಣಿಸುವುದೇ ಉಚಿತವೆಂಬ ತೀರ್ಮಾನಕ್ಕೂ ಅವರು ಬಂದಿದ್ದರು.

---

೧. ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ
ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಮ್ ।
ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ ಪ್ರಪನ್ನಾ
ಮಾನ್ಯಾಃ ಸ್ಮಃ ಕಿಮಪಿ ಚ ವದಂತೋಽಪಿ ಮಹತಾಮ್ ॥ – ಶ್ರೀಮನ್ನ್ಯಾಯಸುಧಾ

೨. ಪ್ರೇಷ್ಠೋ ನ ರಾಮಸ್ಯ ಬಭೂವ ತಸ್ಮಾನ್ನ ರಾಮರಾಜ್ಯೇಽಸುಲಭಂ ಚ ಕಿಂಚಿತ್ ।
ತಸ್ಯಾಪ್ಯಸೇವಾರತಿರೇಷ ನೈಚ್ಛತ್ ತಥಾಽಪಿ ಭೋಗಾನ್ ನನು ಸಾ ವಿರಕ್ತಿಃ ॥– ಸುಮಧ್ವವಿಜಯಃ (೧/೨೪)

ಗುರುಗಳ ಭಾವವನ್ನು ಗ್ರಹಿಸಿದ ಶ್ರೀಜಯತೀರ್ಥರು ತಂದೆಯೊಂದಿಗೆ ಮನೆಗೆ ನಡೆದರು. ಅದರಿಂದಾಗಿ ಕೋಪತಾಪಗಳಲ್ಲೂ ಸ್ವಲ್ಪ ನೆಮ್ಮದಿಯನ್ನು ಕಂಡ ತಂದೆ, ಮನೆಗೆ[೧] ಬರುತ್ತಲೇ ಮಗನು ಮನೆಯಲ್ಲೇ ಉಳಿಯುವಂತಾಗಲು ಮಾಡಬೇಕಾದ ಉಪಾಯದ ಬಗ್ಗೆ ಚಿಂತಿಸಿದ. ಆವನಿಗೆ ತೋರಿತು – 'ಮಗನಿಗೆ ವಿವಾಹವಾಗಿದೆ. ಪತ್ನಿಯರಿನ್ನೂ ಮನೆಗೆ ಬಂದಿಲ್ಲ. ಅದಕ್ಕೆಂದೇ ಸಂಸಾರದ ಮೇಲೆ ಮೋಹ ಆವರಿಸಿಲ್ಲ. ಅವರನ್ನು ಮನೆ ತುಂಬಿಸಿಕೊಂಡಲ್ಲಿ ಮಗ ವಿರಕ್ತಿಯನ್ನು ತೊರೆದಾನು'. ತನಗನ್ನಿಸಿದ್ದನ್ನು ಆತ ನಡೆಸಿಯೂ ಬಿಟ್ಟ.

ಬಗೆ ಬಗೆಯಾಗಿ ಅಲಂಕೃತವಾಗಿದ್ದ ಶಯ್ಯಾಗೃಹ, ಹಾಲಿನ ಕೆನೆಯಂತಹ ಸುಪ್ಪತ್ತಿಗೆ, ರತ್ನಾಭರಣಗಳ ಅಲಂಕಾರ, ಭಕ್ಷ್ಯಭೋಜ್ಯಗಳ ಸಮೃದ್ಧಿ, ಇಂದ್ರಭವನದಂತಹ ವಾತಾವರಣ. ಎಂತಹವನೂ ವಿಷಯಮೋಹಕ್ಕೆ ಸೆಳೆಯಲ್ಪಡಬೇಕಾದ ಭೋಗಮಯಪರಿಸರ ಸೃಷ್ಟಿ-ಯಾಯಿತು. ಆದರೆ ಅವರಿಗೆ ತಿಳಿದಿರಲಿಲ್ಲ – ತನ್ನ ಮಗ ಮೂಲತಃ ದೇವೇಂದ್ರನೇ ಎಂದು. ಮಂಚದ ಮೇಲೆ ಕುಳಿತಿದ್ದ ಅವರ ಬಳಿಗೆ ಅವರ ಪತ್ನಿ ಜಾನಕಿ ಸಂಭ್ರಮ, ಕಾತರಗಳಿಂದ ಮೆಲ್ಲನೆ ಬಳಿ ಸಾರಿದಳು. ತನ್ನ ಕನಸುಗಳಿಗೆ ರೂಪಕೊಡುವ ಹವಣಿಕೆಯಲ್ಲಿದ್ದ ಆಕೆ ತನ್ನ ಪತಿಯತ್ತ ನೋಟ ಬೀರಿದಳು. ಕಂಡಿದ್ದೇನು? ಭುಸುಗುಟ್ಟುವ ಭಯಂಕರ ಸರ್ಪ; ಜಗತ್ತನ್ನೇ ದಹಿಸುವಂತಹ ತೇಜೋರಾಶಿ; ಸೂರ್ಯಚಂದ್ರರಂತೆ ಹೊಳೆಯುವ ಅಗಾಧವರ್ಚಸ್ಸು ತುಂಬಿದ ಸಾಗರದಂತಹ ಪ್ರಶಾಂತತೆ; ಊಹಿಸಲಾಗದ ಅಚ್ಚರಿ, ಭಯ, ಆತಂಕ, ಕಾತರಗಳಲ್ಲಿ ಆಕೆ ಎಚ್ಚರ ತಪ್ಪಿದಳು[೨]. ಆಕೆಯ ಅಚ್ಚರಿಯ ಆರ್ತನಾದ ಇಡೀ ಬಂಧುವರ್ಗವನ್ನೆಲ್ಲ ಅಲ್ಲಿ ತಂದು ನಿಲ್ಲಿಸಿತು. ಅವರು ಕಂಡದ್ದಾದರೂ ಅದೇ ವಿಚಿತ್ರ ದೃಶ್ಯವನ್ನು. ಮನೆಯ ಮಗನೆಂದು ಭಾವಿಸಲ್ಪಟ್ಟ ವ್ಯಕ್ತಿ ಜಗದ್ಗುರುವಾಗಿ ಕಂಗೊಳಿಸುತ್ತಿದ್ದ. ಕಣ್ಣು ಕುಕ್ಕುವ ಆ ತೇಜಸ್ಸು ಅವರ ಊಹೆಗೇ ನಿಲುಕದಾಯಿತು. ಅವರಿಗೆ ಅರ್ಥವಾಗಿತ್ತು. ಈತ ಕೇವಲ ವಂಶೋದ್ಧಾರಕನಲ್ಲ, ಲೋಕೋದ್ಧಾರಕ. ಇಡೀ ಜಗತ್ತೇ ಮಣಿಯುವ ತೇಜೋರಾಶಿ ಆತನದು. ಆತ ಹುಟ್ಟಿರುವುದು ಸಂಸಾರಕ್ಕಲ್ಲ, ಸನ್ಯಾಸಕ್ಕೆ. ಹೊರಗಣ್ಣಿಗೆ ಕಂಡ ದೃಶ್ಯ ಅವರ ಒಳಗಣ್ಣನ್ನು ತೆರೆಸಿತು. ವ್ಯಾಸರಿತ್ತ ದಿವ್ಯದೃಷ್ಟಿಯಿಂದ ದ್ರೌಪದಿಯನ್ನೂ, ಪಾಂಡವರನ್ನೂ ಸಾಕ್ಷಾತ್ ದೇವಶ್ರೇಷ್ಠರುಗಳೆಂದು ಪ್ರತ್ಯಕ್ಷ ಕಂಡ ದ್ರುಪದರಾಜನ ಸ್ಥಿತಿಯಂತೆ ನರಸಿಂಗರಾಯನ ಸ್ಥಿತಿಯಾಗಿತ್ತು. ಭಯಭಕ್ತಿಗಳು ಮನಸ್ಸನ್ನಾವರಿಸಿದವು.

---

೧. ಇತಿ ನಿಗದಿತಮಸ್ಯಾಕರ್ಣ್ಯ ನಿರ್ಭರ್ತ್ಸ್ಯ ಪುತ್ರಂ
ದ್ರುತಮಥ ವರವರ್ಮೋಷ್ಣೀಷಯುಕ್ತಂ ವಿಧಾಯ।
ಸ್ವಯಮನಯತ ಗೇಹಂ ವಾಜಿವರ್ಯೇ ನಿಷಣ್ಣಂ
ಸ್ವಮನಸಿ ಕೃತಕೃತ್ಯೋಽಸ್ಮೀತಿ ಸಮ್ಮಾನಯಾನಃ॥ – ವ್ಯಾ.ಜ.ವಿ.(೪/೪೨)

೨. ಯತಿಮಪಿ ದದೃಶೇ ಸಾ ಭೋಗಿವತ್ ಪ್ರೊತ್ಥಿತಂ ತಂ
ಜ್ವಲನಮಿವ ತಪಂತಂ ಶೋಭಯಾ ಸ್ವಾಂ ಸ್ವಶಂತಮ್।
ಜ್ವಲಿತತನುರುಪಾಗಾತ್ ಘೋಷಯಂತೀ ಸ್ವಗೇಹಾದ್-
ಭಯಭರವಿಕೃತಾಂಗೀ ವೇಪಮಾನಾ ಕೃಶಾಂಗೀ॥ -ವ್ಯಾ.ಜಯತೀರ್ಥವಿಜಯ (೪/೪೪)

ಬಂಧುಜನರೂ ನುಡಿದರು – 'ನಿನ್ನ ಮಗ ದೇವತೆಯೋ, ಮುನಿಯೋ ಇರಬೇಕು; ಮನುಷ್ಯಮಾತ್ರನಂತು ಸರ್ವಥಾ ಅಲ್ಲ. ಈತನು ನಿನ್ನ ಮಗನಾಗಿ ಜನಿಸಿರುವುದು ನಿನ್ನ ಸುಕೃತ. ಈಗಲೇ ಇವರನ್ನು ಗುರುಗಳಿಗೆ ಒಪ್ಪಿಸಿಬಿಡು'. ಮತ್ತೆ ತಡಮಾಡಲಿಲ್ಲ. ಅವರೆಲ್ಲ ಕೂಡಿಕೊಂಡು ಅವರನ್ನು ಭಕ್ತಿಭಾವದಿಂದ ಕರೆದೊಯ್ದು ಶ್ರೀಅಕ್ಷೋಭ್ಯತೀರ್ಥರ ಪದತಲಕ್ಕೆ ಅರ್ಪಿಸಿದರು.

ಶ್ರೀಅಕ್ಷೋಭ್ಯತೀರ್ಥರು ಮಹಾವಿದ್ವಾಂಸರು, ಮಹಾತಪಸ್ವಿಗಳು ಮಾತ್ರವಾಗಿರದೆ, ಯೋಗಿಶ್ರೇಷ್ಠರೂ ಆಗಿದ್ದರು. ಅಂತಹವರಿಗೆ ಇದಾವುದೂ ಅನಿರೀಕ್ಷಿತವೆನ್ನಿಸಲಿಲ್ಲ. ತಮ್ಮ ಜ್ಞಾನದೃಷ್ಟಿಯಿಂದ ಇದನ್ನೆಲ್ಲ ಆ ಮೊದಲೇ ಅರಿತಿದ್ದ ಅವರಿಗೆ ಇದಾವುದೂ ಅಚ್ಚರಿ ಎನ್ನಿಸಲಿಲ್ಲ. ಅವರಿಗೆ ಅಚ್ಚರಿ ಎನ್ನಿಸಿದ್ದು ಇದಕ್ಕೆಲ್ಲ ಮೂಲಕಾರಣವಾದ ಭಗವಂತನ ಮಹಿಮೆ ಮಾತ್ರ. ಪ್ರಶಾಂತವಾಗಿಯೇ ತಮ್ಮನ್ನು ಸ್ವಾಗತಿಸಿ, ಶ್ರೀಜಯತೀರ್ಥರನ್ನು ಸ್ವೀಕರಿಸಿದ ಶ್ರೀಅಕ್ಷೋಭ್ಯ-ತೀರ್ಥರ ಹಿರಿಮೆ ಅವರನ್ನೆಲ್ಲ ಮೂಕವಿಸ್ಮಿತರನ್ನಾಗಿಸಿತ್ತು. ಇಂತಹವರ ಬಗ್ಗೆ ತಾನು ಮೊದಲು ನಡೆದುಕೊಂಡ ರೀತಿಯ ಬಗ್ಗೆ ಅವನಿಗೆ ಅಸಹ್ಯವೆನ್ನಿಸಿತು. ಪಶ್ಚಾತ್ತಾಪದ ಕಣ್ಣೀರಲ್ಲಿ ಮಿಂದ ಅವನಿಗೆ ಅದೇ ಪ್ರಾಯಶ್ಚಿತ್ತ ನೀಡುವ ಗಂಗಾಜಲವೆನ್ನಿಸಿತು. ಅಪಾರ ವೈಭವವನ್ನೆಲ್ಲ ಅಂತಹ ತುಂಬು ತಾರುಣ್ಯದಲ್ಲಿಯೇ ತ್ಯಜಿಸಿ, ಸರ್ವಸಂಗಪರಿತ್ಯಾಗಿ ಎನ್ನಿಸಿದ ಮಹಾತ್ಮನನ್ನು ಆವರೆಗೂ ತನ್ನ ಮಗನೆಂದು ಮಾತ್ರ ತಿಳಿದು ಪ್ರೀತಿಸುತ್ತಿದ್ದ ಆತನಿಗೆ ತನ್ನ ತಪ್ಪಿನ ಅರಿವಾಯಿತು. ಲೋಕಗುರುವೊಬ್ಬನನ್ನು ಮನೆಯ ಮಗನೆಂದು ಭಾವಿಸಿದ ಅಪರಾಧಕ್ಕೆ ಮಮ್ಮಲ ಮರುಗಿದ. ಶ್ರೀಜಯತೀರ್ಥರು ನಿರ್ವಿಕಾರಚಿತ್ತದಿಂದ ನುಡಿದರು – 'ನನ್ನ ವಿರಹ ನಿಮ್ಮನ್ನು ಕಾಡದಿರಲಿ. ಎಲ್ಲರಿಗೂ ಆನಂದ ನೀಡುವ ಆ ಭಗವಂತನನ್ನೇ ಆರಾಧಿಸುತ್ತ ಜನ್ಮ ಸಾರ್ಥಕಪಡಿಸಿಕೊಳ್ಳಿರಿ. ಮುಂದೆ ನಿಮಗೆ ದೈವಾನುಗ್ರಹದಿಂದ ಮತ್ತೊಬ್ಬ ಪುತ್ರ ಜನಿಸುವನು. ಅವನೊಂದಿಗೆ ಸುಖದಿಂದಿರಿ[೧]''. ಆಗಲೇ ವಿರಹದ ನೋವನ್ನು ಗೆಲ್ಲುವ ಮಟ್ಟ ಮುಟ್ಟಿದ್ದ ಧುಂಡಿರಾಜನಿಗೆ ಈ ಮಾತು ಅಮೃತಸೇಚನದಂತಾಯಿತು. ಶಾಸ್ತ್ರ ಹೇಳುತ್ತದೆ – ''ಸಂಬಂಧಿಗಳಿಗೆಲ್ಲ ಅಭಯ ನೀಡಿ ಸಂನ್ಯಾಸ ಸ್ವೀಕರಿಸಬೇಕು''. ಆದರೆ ಶ್ರೀಜಯತೀರ್ಥರು ಆಶ್ರಮಸ್ವೀಕರಿಸಿಯೇ ಅವರಿಗೆಲ್ಲ ಅಭಯ ನೀಡಿದರು. ಮಾತಿನಿಂದ ನೀಡಬಹುದಾದ ಅಭಯವನ್ನು ಕೃತಿಯಿಂದಲೇ ನೀಡಿದ್ದು ಅವರ ಅಪೂರ್ವಮಹಿಮೆಯಾಯಿತು.

## ಮತ್ತೊಮ್ಮೆ ಶಾಸ್ತ್ರಪಾಠ

ಮುಂದಿನ ದಿನಗಳಲ್ಲಿ ಪಾಠಪ್ರವಚನಗಳದ್ದೇ ವೈಭವ. ಆಚಾರ್ಯರ ಬಾಯಿಂದ ಸ್ವತಃ ಪಾಠ ಕೇಳಿದ ಸಾರ್ಥಕ್ಯದ ಅಕ್ಷೋಭ್ಯತೀರ್ಥರು ಗುರುಗಳು; ಆಚಾರ್ಯರ ಮುಂದೆ ಎತ್ತಿನ

೧. ''ಸರ್ವದಾಽನ್ಯಂ ಕನಿಷ್ಠಂ ಪುತ್ರಂ ದೃಷ್ಟ್ವಾ ಮುಚಂ ತ್ವಂ ಜಹಿ..... – ಅ.ಜ.ವಿ.(ಶ್ಲೋ. ೧೩)
ಸೋಽಪಿ ದೃಷ್ಟ್ವಾಽನ್ಯಪುತ್ರಮ್ । ಹಿತ್ವಾ ಶೋಕಮ್.....
– ಬಿದರಹಳ್ಳಿ ಶ್ರೀನಿವಾಸತೀರ್ಥಕೃತ ಜಯಾರ್ಯಸ್ತುತಿಃ (ಶ್ಲೋ. ೬)

ರೂಪದಲ್ಲಿ ಕುಳಿತು ಪಾಠ ಕೇಳಿದ್ದ ಶ್ರೀಜಯತೀರ್ಥರು ಶಿಷ್ಯರು. ಒಂದರ್ಥದಲ್ಲಿ ಇಬ್ಬರೂ ಆಚಾರ್ಯರ ಸಾಕ್ಷಾಚ್ಛಿಷ್ಯರೇ ಆಗಿದ್ದವರು. ಹೇಳುವ ಶ್ರೀಅಕ್ಷೋಭ್ಯತೀರ್ಥರಿಗೆ ಸಂಪೂರ್ಣ ಎಚ್ಚರವಿತ್ತು. ಇವು ನನ್ನ ಮಾತುಗಳಲ್ಲ, ನನ್ನ ಗುರುಗಳ ಮಾತುಗಳು. ಕೇಳುವ ಶ್ರೀಜಯ-ತೀರ್ಥರಿಗೂ ಪೂರ್ಣಸ್ಮರಣೆಯಿತ್ತು – 'ಇವೆಲ್ಲ ನಾನು ಕೇಳಿದ್ದ ನನ್ನ ಗುರುಗಳ ಮಾತುಗಳೇ'. ಇಂತಹ ಅಪೂರ್ವ ಅನುಸಂಧಾನವಿದ್ದದ್ದರಿಂದಲೇ ಅವರ ಅಧ್ಯಯನ ತಪಸ್ಸಾಯಿತು. ಅವರ ಮಾತುಗಳು ಮಂತ್ರಗಳಾದವು. ಗಿಳಿಗೆ ತಿಳಿಹೇಳುವ ಶ್ರದ್ಧೆಯಿಂದ ಅಕ್ಷೋಭ್ಯತೀರ್ಥರು ಪಾಠ ಹೇಳಿದರು[೧]. ಎತ್ತಾಗಿ ಆಚಾರ್ಯರ ಮುಂದೆ ಕೇಳಿದ್ದ ಶ್ರೀಜಯತೀರ್ಥರು, ಈಗ ಗಿಳಿಯಂತೆ ಕುಳಿತು ಅಕ್ಷೋಭ್ಯತೀರ್ಥರಿಂದ ಕೇಳಿದರು. ಎಂದರೆ ಅದು ಗಿಳಿಪಾಠವಾಯಿತು. ಲೋಕದ ಗಿಳಿಪಾಠವಾಗದೆ, ಶಾಸ್ತ್ರದ ಶುಕಪಾಠವಾಯಿತು. ವೇದವ್ಯಾಸರ ಮುಂದೆ ಕುಳಿತ ಶುಕಾ-ಚಾರ್ಯರ ಬಾಯಿಂದ ಬಂದಿದ್ದು ಶ್ರೀಮದ್ಭಾಗವತಾಮೃತವಾದರೆ, ಅಕ್ಷೋಭ್ಯತೀರ್ಥರ ಮುಂದೆ ಶುಕಾಚಾರ್ಯರಂತೆ ಕುಳಿತ ಜಯತೀರ್ಥರ ಮಾತುಗಳು ನ್ಯಾಯಸುಧೆಯಾಯಿತು.

ಶ್ರೀಮದಾಚಾರ್ಯರ ಮುಖದಿಂದ ಕೇಳಿದ್ದ ಶಾಸ್ತ್ರವನ್ನೇ ಶ್ರೀಜಯತೀರ್ಥರು ಶ್ರೀಅಕ್ಷೋಭ್ಯತೀರ್ಥರ ಮುಖದಿಂದ ಶ್ರವಣ ಮಾಡಿದರು. ಹಾಗೆ ಮತ್ತೆ ಮತ್ತೆ ಶ್ರವಣ ಮಾಡುವುದರಲ್ಲೇ ಶಾಸ್ತ್ರದ ಹಿರಿಮ ಅಡಗಿದೆ. ನಿಜವಾದ ಸಾಧನೆಯೆಂದರೂ ಅದೇ – **'ಆವೃತ್ತಿರಸಕೃದುಪದೇಶಾತ್'**. ಸತ್ಯಕಾಮ, ಉಪಕೋಸಲ ಮೊದಲಾದ ಮುನಿಗಳು ದೇವತೆಗಳಿಂದ ಶ್ರವಣ ಮಾಡಿದ ಅನಂತರವೂ ತಮ್ಮ ನಿಯತಗುರುಗಳಿಂದ ಪುನಃ ತತ್ತ್ವಶ್ರವಣ ಮಾಡಿದ ವಿಚಾರ ಛಾಂದೋಗ್ಯೋಪನಿಷತ್ತಿನಲ್ಲಿ ಪ್ರಸಿದ್ಧವೇ ಇದೆ.

## ಟೀಕಾರಚನೆಗೆ ಆದೇಶ

ದಿನಗಳು ಉರುಳಿದವು. ಪಕ್ಷಗಳು, ಮಾಸಗಳೂ ಕಳೆದವು. ವತ್ಸರಗಳೂ ಸಾಗಿದವು. ಪಾಠಪ್ರವಚನಗಳು ಮಾತ್ರ ನಿರಂತರ ನಡೆದೇ ಇದ್ದವು. ಕೊನೆಗೊಮ್ಮೆ ಅಕ್ಷೋಭ್ಯತೀರ್ಥರು ನುಡಿದರು – 'ಜಯತೀರ್ಥರೇ, ಇನ್ನು ನಿಮ್ಮಿಂದ ಬರೆಯುವ ಕೆಲಸ ಆಗಬೇಕು. ಶಿಷ್ಯರಿಗೆ ಹೇಳುವ ಕೆಲಸವಾಗಬೇಕು. ವಾದಿನಿಗ್ರಹವಾಗಬೇಕು. ಶಿಷ್ಯಸಂಗ್ರಹವಾಗಬೇಕು. ಅಜರಾಮರ-ವೆನ್ನಿಸುವ ಶಾಶ್ವತಸೇವೆ ನಿಮ್ಮಿಂದಾಗಬೇಕು. ಶ್ರೀಮದಾಚಾರ್ಯರ ಗ್ರಂಥಗಳು ಪರಮತಾರಕ; ಅವುಗಳ ಶೈಲಿ ಬಾಲರಿಗೂ ಬೋಧಕ; ಆದರೆ ಅರ್ಥದ ಗಾಂಭೀರ್ಯವು ಸಮುದ್ರವನ್ನು ನಾಚಿಸುವಷ್ಟು ಅಪಾರ. ಎಂದರೆ ಅವು ಶಬ್ದದಲ್ಲಿ ವಾಮನ; ಅರ್ಥದಲ್ಲಿ ತ್ರಿವಿಕ್ರಮ. ಸೂಕ್ತ

೧. ಅಕ್ಷೋಭ್ಯತೀರ್ಥಗುರುಣಾ ಶುಕವಚ್ಛಿಕ್ಷಿತಸ್ಯ ಮೇ ।
ವಚೋಭಿರಮೃತಪ್ರಾಯೈಃ ಪ್ರೀಯಂತಾಂ ಸತತಂ ಬುಧಾಃ॥ –ಗೀ.ಭಾ.ಪ್ರಮೇಯದೀಪಿಕಾ

ಶ್ರೀಮಧ್ವದೇವಮುಖವಿಸ್ಸೃತವೇದಸಾರಭಾಷ್ಯಾದಿಶಾಸ್ತ್ರಗುರುವರ್ಣಿತಭಾವಮಸ್ಮೈ ।
ಅಕ್ಷೋಭ್ಯತೀರ್ಥಯತಿರಾಹ ಕರಾಬ್ಜಜಾಯ ಪ್ರೀತ್ಯಾ ತಮಾಶು ಹೃದಯೇ ವಿಷಯೀಚಕಾರ ॥
– ಜಯೀಂದ್ರೋದಯ(೫/೨೨)

ವಿವರಣೆ ಇಲ್ಲವಾದಲ್ಲಿ ಸಾಮಾನ್ಯರಿಗೆ ಅವುಗಳ ಮಹಿಮೆ ಗೋಚರಿಸದು. ಈವರೆಗೂ ಅವರಿಂದ ನೇರವಾಗಿ ಶ್ರವಣ ಮಾಡಿದ ನಮ್ಮಂತಹವರು ಇದ್ದದ್ದರಿಂದ ಇದು ಮುಂದಿನ ಜನಕ್ಕೆ ಅವುಗಳು ತಲುಪಬೇಕಾದರೆ ನಮ್ಮಿಂದ ನೀವು ಕೇಳಿದ ವಿವರಣೆಗಳನ್ನೆಲ್ಲ ಗ್ರಂಥರೂಪದಲ್ಲಿ ನೀವೇ ದಾಖಲು ಮಾಡಬೇಕು. ಅದಕ್ಕೆಂದೇ ನಿಮ್ಮ ಅವತಾರ. ಭಾಷ್ಯವಿಲ್ಲದೆ ಸೂತ್ರಾರ್ಥ ತಿಳಿಯದು; ನಿಮ್ಮ ಟೀಕೆಯಿಲ್ಲದೆ ಭಾಷ್ಯಾರ್ಥ ತಿಳಿಯದು. ಅಂತಹ ಟೀಕೆಗಳನ್ನು ಬರೆಯುವ ಹೊಣೆಯನ್ನು ಭಗವಂತ ನಿಮಗೆ ನೀಡಿರುವನು'. ಈ ಮಾತುಗಳನ್ನು ಕೇಳುತ್ತಿದ್ದಂತೆ ಶ್ರೀಜಯ-ತೀರ್ಥರಿಗೆ ಆಚಾರ್ಯರ ಅಂದಿನ ವಾಣಿ ಕಿವಿಯಲ್ಲಿ ಮೊಳಗಿತು – **'ವ್ಯಾಖ್ಯಾಸ್ಯತ್ಯೇಷ ಗೋರಾಟ್'**. ಹಾಗೆ ವ್ಯಾಖ್ಯಾನ ಬರೆಯುವ ಆ ಎತ್ತು ನಾನೆ. ಹೃದಯ ಹಿಗ್ಗಿತು.

## ಪ್ರಥಮ ದಿಗ್ವಿಜಯ

ಶ್ರೀಅಕ್ಷೋಭ್ಯತೀರ್ಥರು ಆಗೊಮ್ಮೆ ಶ್ರೀಜಯತೀರ್ಥರನ್ನು ದಿಗ್ವಿಜಯಕ್ಕೆಂದು ಕಳುಹಿಸಿ-ದರು. ಭರತಖಂಡದ ಬಹುಭಾಗವನ್ನು ಸಂಚರಿಸಿ, ವಾದಿಗಳನ್ನು ಜಯಿಸಿ ಪುನಃ ಗುರುಗಳೆಡೆಗೆ ಧಾವಿಸಿದ ಶ್ರೀಜಯತೀರ್ಥರು ಆ ವಿವರಗಳನ್ನೆಲ್ಲ ಗುರುಗಳಿಗೆ ಒಪ್ಪಿಸಿ, ಅವರ ವಿಶೇಷಪ್ರೀತಿಗೆ ಪಾತ್ರರೆನ್ನಿಸಿ, ಪುನಃ ಅಧ್ಯಯನವನ್ನು ಮುಂದುವರೆಸಿದರು[೧]. ಮುಂದೊಮ್ಮೆ ಶ್ರೀಅಕ್ಷೋಭ್ಯ-ತೀರ್ಥರು ಮಳಖೇಡದಲ್ಲಿ ಹರಿಧ್ಯಾನರತರಾದರು[೨]. ಆ ಮುನ್ನ ಅವರು ಶ್ರೀತ್ರೈಲೋಕ್ಯ-ಭೂಷಣತೀರ್ಥರು ಎಂಬುವರಿಗೆ ಸಂನ್ಯಾಸದೀಕ್ಷೆ ನೀಡಿದರು; ಅವರಿಂದ ಶಾಖಾಮಠವೊಂದು ಪ್ರವರ್ತಿತವಾಗಿ ಶ್ರೀಆರ್ಯಅಕ್ಷೋಭ್ಯತೀರ್ಥಮಠವೆಂದು ಪ್ರಸಿದ್ಧಿ ಪಡೆಯಿತು.

## ತಪಸ್ಸು, ದುರ್ಗಾನುಗ್ರಹ

ಶ್ರೀಜಯತೀರ್ಥರು ಗುರುಗಳ ಆರಾಧನಾ ಮಹೋತ್ಸವವನ್ನು ವೈಭವದಿಂದ ನೆರವೇರಿಸಿ, ಅವರು ಆದೇಶಿಸಿದ್ದಂತೆ ಗ್ರಂಥರಚನೆಗೆ ಮನಸ್ಸು ಮಾಡಿದರು. ಅವರಿಗೆ ತಿಳಿದಿತ್ತು – ಬರವಣಿಗೆ ನಡೆಯುವುದು ಪಾಂಡಿತ್ಯದಿಂದಲ್ಲ, ಗುರ್ವನುಗ್ರಹದಿಂದ. ಅಂತಹ ಗುರ್ವನು-ಗ್ರಹವು ಹೆಚ್ಚಿದಷ್ಟು ಜ್ಞಾನಕಾರ್ಯಕ್ಕೆ ಮಹತ್ತ್ವ ಹೆಚ್ಚುವುದು. ಅಂತಹ ವಿಶೇಷ ಗುರ್ವನುಗ್ರಹದ ಸಂಪಾದನೆ ಆಗಬೇಕು. ಅದಕ್ಕೆ ಉಗ್ರತಪಸ್ಸೊಂದೇ ದಾರಿ. ದುರ್ಗಾಬೆಟ್ಟ[೩] ಅವರ ತಪೋ-

---

೧. ಏವಂ ಜಿತ್ವಾ ಕುವಾದೀನಗಮದಿಹ ಗುರುಃ ಶ್ರೀಮದಕ್ಷೋಭ್ಯತೀರ್ಥ-
ಪ್ರಾಂತಂ ಮಧ್ವಾಗಮಾಂಸ್ತು ಪ್ರತಿದಿನಮಶೃಣೋದ್ಭಕ್ತಿನಮ್ರಸ್ತದಂತೇ।
– ಶ್ರೀವ್ಯಾಸತೀರ್ಥಕೃತಶ್ರೀಜಯತೀರ್ಥಸ್ತೋತ್ರಮ್(ಶ್ಲೋ.೧೫)

೨. ಮುಂಚೆ ಮಳಖೇಡದ ಕೊತ್ತಲು ಎಂಬಲ್ಲಿ ಇದ್ದ ಶ್ರೀಅಕ್ಷೋಭ್ಯತೀರ್ಥರ ಮೂಲಬೃಂದಾವನವು ಶ್ರೀಜಯತೀರ್ಥರ ವೃಂದಾವನಪ್ರವೇಶದ ಅನಂತರದ ಕಾಲದಲ್ಲಿ ಅವರ ಬೃಂದಾವನದ ಬಲ ಬದಿಗೆ ಸ್ಥಳಾಂತರಗೊಂಡಿತು ಎಂದು ಪ್ರತೀತಿ. ಅವರ ಮುಂಚಿನ ಬೃಂದಾವನದ ಸ್ಥಳವನ್ನು ಸಹ ಇಂದು ಕಾಣಬಹುದು; ಅದು ಅಕ್ಷೋಭ್ಯತೀರ್ಥಮಂಟಪವೆಂದೇ ಮಳಖೇಡದಲ್ಲಿ ಪ್ರಸಿದ್ಧ.

೩.. ಇತಿ ಸುಸಂಧ್ಯದಶಾಪ್ತಸಮೀಹಿತೋ ..... – ಘ.ಜ.ವಿ. (೪/೨೪)

ಭೂಮಿಯಾಯಿತು. ಹೊರಗಣ್ಣು ಮುಚ್ಚಿತ್ತು, ಒಳಗಣ್ಣು ತೆರೆಯಿತು. ತಾವು ಕೇಳಿದ್ದ ಶಾಸ್ತ್ರತತ್ತ್ವವನ್ನು ಕಣ್ಣಾರೆ ಕಾಣತೊಡಗಿದರು. ಮೊದಲೇ ಮಿತಾಹಾರಿಯಾಗಿದ್ದ ಅವರು ಮತ್ತಷ್ಟು ಮಿತಾಹಾರಿಯಾದರು. ಭೋಗಗಳಿರಲಿ, ಭೋಗಸಾಮಗ್ರಿಯೂ ಅವರ ಬಳಿ ಸುಳಿಯುವಂತಿರಲಿಲ್ಲ. ಬೆಂದ ಪದಾರ್ಥವಿರಲಿ, ಒಣಕಾಳೂ ಅವರಿಗೆ ಬೇಡವಾಯಿತು. ಹಸಿ ಹುಲ್ಲು, ಹಸಿ ಎಲೆಗಳೂ ಅವರಿಗೆ ತ್ಯಾಜ್ಯವೆನ್ನಿಸಿತು. ಕೊನೆಗೂ ಅವರು ಆಹಾರವನ್ನಾಗಿ ಆಯ್ದುಕೊಂಡಿದ್ದು ಒಣಹುಲ್ಲು, ತಾವಾಗಿ ಬಿದ್ದ ಒಣ ಎಲೆಗಳನ್ನು [೧]ಮಾತ್ರ. ಅವನ್ನು ತಿನ್ನಲು ಅವರು ಸಾಧನವನ್ನಾಗಿ ಬಳಸಿದ ಸಾಮಗ್ರಿ ಪಂಚಗವ್ಯ ಮಾತ್ರ. ಮಾಡುವುದಿರಲಿ, ಊಹಿಸಲೂ ಭಯಂಕರವೆನ್ನಿಸುವ ತಪಸ್ಸು. ಅಂತಹ ತಪಸ್ಸನ್ನು ಕಲಿಯುಗದಲ್ಲಿ ಊಹಿಸುವುದೂ ಕಷ್ಟ ಶ್ರೀಮದಾಚಾರ್ಯರ ತಮ್ಮ ಶ್ರೀವಿಷ್ಣುತೀರ್ಥರು ಹಾಗೆ ಮಾಡಿದ್ದ ಉಲ್ಲೇಖ ಸುಮಧ್ವ-ವಿಜಯದಲ್ಲಿ ಉಂಟು. ಎಂದರೆ ಇವರು ಮತ್ತೊಬ್ಬ ವಿಷ್ಣುತೀರ್ಥರಾದರು. ಅವರು ಆಚಾರ್ಯರ ತಮ್ಮ; ಇವರು ಆಚಾರ್ಯರ ಶಿಷ್ಯ. ಇಬ್ಬರೂ ಭೀಮನಿಗೆ ಅರ್ಜುನನಂತೆ ಆಚಾರ್ಯರಿಗೆ ಪರಮಪ್ರಿಯರಾದರು. ಧ್ರುವಾದಿಗಳು ಇಂತಹ ತಪಸ್ಸನ್ನು ಮಾಡಿದ ಉಲ್ಲೇಖ ಭಾಗವತಾದಿಪುರಾಣಗಳಲ್ಲಿ ಬಂದಿದೆ.

[೨]ತಪಸ್ಸಿಗಿಂತ ಮಿಗಿಲಾದ ಸಾಧನ, ಧನ ಬೇರಾವುದು? ಅವರ ತಪಸ್ಸು ಫಲಿಸಿತು. ಭಗವಂತ ಅನುಗ್ರಹಿಸಿದ. ದುರ್ಗಾದೇವಿ, ಸರಸ್ವತಿಯರು ಪ್ರತ್ಯಕ್ಷರಾದರು. ಅಜ್ಞಾನದ ಒಡತಿ ದುರ್ಗಾದೇವಿ. ಅವರ ಒಲುಮೆಯಿಂದ ಇವರಿಗೆ ಅಜ್ಞಾನ, ಮಿಥ್ಯಾಜ್ಞಾನಗಳ ಹೆಸರೂ ಇಲ್ಲವಾಯಿತು. ಸರಸ್ವತಿ ಮಾತಿನ ಒಡತಿ. ಅವರ ಒಲುಮೆಯಿಂದ ಇವರ ಮಾತುಗಳು ಮಂತ್ರವಾದವು. ಅನುಗ್ರಹದ ಕುರುಹಾಗಿ ಅವರು ನೀಡಿದ್ದು ಒಂದು ಘಂಟಾ, ಮತ್ತೊಂದು ಪೂಗ. ಘಂಟೆ ಬರೆಯುವ ಸಾಧನವಾದರೆ, ಪೂಗ ಶೋಧನಸಾಮಗ್ರಿಯಾಯಿತು. ಆ ಘಂಟೆಯನ್ನು ನೀಡಿದ್ದು ಸರಸ್ವತಿಯಾದರೂ, ಅದನ್ನು ಅವರು ಪಡೆದದ್ದು ಸಾಕ್ಷಾತ್ ಶ್ರೀಮಧ್ವಮುನಿಗಳಿಂದ[೩].

---

೧. ಉದರಂಭರಿರಾಸ ಪತ್ರಪೂಗೈರ್ಭುವಿಪನ್ನೈರಪಿ ಪಂಚಗವ್ಯಯೋಗ್ಯೈಃ ।
ಅಚಿರೇಣ ಸರಸ್ವತೀ ಪ್ರಸನ್ನಾ ಯತಿವರ್ಯೇ ಸಮಭೂದ್ದರಿಪ್ರಣುನ್ನಾ ॥

೨. ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ । -ಗೀತಾ (೧೮/೫)
ಸ್ಪರ್ಶೇಷು ಯತ್ ಷೋಡಶಮೇಕವಿಂಶಂ ನಿಷ್ಕಿಂಚನಾನಾಂ ನೃಪ ಯದ್ಧನಂ ವಿದುಃ । - ಭಾಗವತ
- ಎಂದರೆ , ತ, ಪ = ತಪ ; ೧೬ನೆಯದು ಹಾಗೂ ೨೧ನೆಯದು ಎಂದರೆ ತ಼ಪ ಎಂದಾಗುವುದು. ಇದರಿಂದ ಸರ್ವಮೂಲಗ್ರಂಥಗಳ ಶ್ರವಣ ಮನನಾದಿಗಳೇ ಮಹತ್ತರವಾದ ತಪಸ್ಸು ಎಂಬ ಸೂಕ್ಷ್ಮತತ್ತ್ವ ಧ್ವನಿತವಾಗುವುದು.

೩. ಸಕಲಾಕೃತಿಲೇಖನಾಯ ಘಂಟಾಂ ನಿಶಿತಾಗ್ರಾಂ ದ್ರುಹಿಣಪ್ರಿಯಾ ವರಿಷ್ಠಾಮ್ ।
ಪರಿಶೋಧನಸಾಧನಂ ಚ ಪೂಗಂ ಪ್ರದದೌ ತಸ್ಯ ನಿರೀಕ್ಷ್ಯ ಭಕ್ತಿಯೋಗಮ್ ॥
-ವ್ಯಾಸತೀರ್ಥೀಯ ಜಯತೀರ್ಥವಿಜಯ (೫/೧೦-೧೧)

ಶ್ರೀಜಯತೀರ್ಥರು ಒಮ್ಮೆ ತಪೋನಿರತರಾಗಿದ್ದಾಗ ಶೇಷದೇವರು ಬಂದು ಅವರ ನಾಲಿಗೆಯ ಮೇಲೆ ಹೆಡೆಯಾಡಿಸಿದರಂತೆ. ಅದರಿಂದಾಗಿ ಅವರಲ್ಲಿ ಶ್ರೀಶೇಷದೇವರ ಆವೇಶವೂ ಸೇರಿ ವಿಶೇಷಜ್ಞಾನಸಿದ್ಧಿಯೊಂದಿಗೆ ಅಪೂರ್ವವಾಕ್ಸಿದ್ಧಿಯೂ [೧]ಲಭಿಸಿತು. ಶೇಷದೇವರು ವ್ಯಾಖ್ಯಾನದೇವತೆ ಎಂಬ ಶಾಸ್ತ್ರದ ಮಾತು ಇಲ್ಲಿ ಗಮನಾರ್ಹ. ಅವರಿಂದ ರಚಿತವಾದ ಅಪ್ರತಿಮಟೀಕಾಗ್ರಂಥಗಳು ಇದಕ್ಕೆ ಸಾಕ್ಷಿಯಾಗಿವೆ.

## ಯರಗೋಳದಲ್ಲಿ ಗ್ರಂಥರಚನೆ

ಗ್ರಂಥರಚನೆಯ ಸಿದ್ಧತೆ ಪೂರ್ಣವಾಯಿತು. ಇನ್ನು ಅದಕ್ಕೆ ಸೂಕ್ತವಾದ ಸ್ಥಳದ ಆಯ್ಕೆ. ಅದಕ್ಕೂ ಸೂಚನೆ ದೊರೆಯಿತು. [೨]ಯರಗೋಳ ಗ್ರಾಮದ ಬಳಿಯ ಬೆಟ್ಟ, ಅದರಲ್ಲೊಂದು

---

ಕೃತಿವಿಲೇಖನಸಾಧನಮಾಯಸಂ ಸುಶಿಖಾಗ್ರಮದಾತ್ ಕ್ರಮುಕಂ ಚ ಸಾ ।
ವಿವರಣಾನಿ ಲಿಖನ್ ಪರಿಶೋಧಯಾತ ಉರುನಿಬಂಧತತೇರಿತಿ ॥ – ಛ.ಜ.ವಿ. (೫/೨೩.)

ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।
ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ।

–ಎಂಬ ಅವರ ನ್ಯಾಯಸುಧೆಯ ಮಾತು ಇದಕ್ಕೆ ಸೂಚನೆಯಂತಿದೆ.

ಇವು ಶ್ರೀ ದುರ್ಗಾದತ್ತವೆಂದೂ, ಶ್ರೀ ಮಧ್ವಮುನಿದತ್ತವೆಂದೂ ಪಕ್ಷಾಂತರಗಳುಂಟು;

ಪ್ರಾಯಾದ್ದುರ್ಗಾಲಯಂ ಚ ಪ್ರತಿದಿನಮಕರೋದ್ಬುದ್ಧಿಮಾನ್ ಸತ್ತಪೋಽಗ್ರ್ಯಂ ।
ದುರ್ಗಾ ತಸ್ಮಾತ್ ಪ್ರಸನ್ನಾ ಹ್ಯವದತಿತರಾಂ.....

– ಶ್ರೀವ್ಯಾಸತೀರ್ಥಕೃತಅಣುಜಯತೀರ್ಥವಿಜಯ (ಶ್ಲೋ. ೧೬)

....ಮಧ್ವಮುನಿರ್ವಿಲೇಖನಕೃತೇ ಯಸ್ಮೈ ದದೌ ಸಾಧನಮ್ ।

– ನಾರಾಯಣಾಚಾರ್ಯಕೃತಶ್ರೀಜಯತೀರ್ಥಮಂಗಲಾಷ್ಟಕಮ್(೪)

ಸ್ವಪ್ನೇ ತು ಶ್ರೀಮದಾಚಾರ್ಯಾ ಲೇಖನೀಂ ಚ ಕಪರ್ದಿಕಾಮ್ ।
ದದುಸ್ತಸ್ಮೈ ಸೋಽಪಿ ತಾಭ್ಯಾಂ ಚಕಾರ ಗ್ರಂಥಸಂಚಯಮ್ । –ಗುರುಮಾಹಾತ್ಮ್ಯರತ್ನಾವಳಿ(೨೭)

– ಇವೆಲ್ಲಾ ಒಟ್ಟಾಗಿ 'ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣರ ಅನುಗ್ರಹದಿಂದ ಅವರು ಗ್ರಂಥರಚನೆ ಮಾಡಿದರು' ಎಂಬ ಭಾವವನ್ನು ಧ್ವನಿಸುವುದರಿಂದ ಪರಸ್ಪರ ವಿರುದ್ಧವೆನ್ನಿಸಲಾರವು.

೧. ಕದಾಚಿಜ್ಜಪಸಕ್ತೇಷು ಜಯತೀರ್ಥೇಷು ಸರ್ಪರಾಟ್ ।
ತದೀಯಜಿಹ್ವಾಮಾಲಿನ್ಯಂ ಸ್ವಮುಖೇನಾಜಹಾರ ಹ ॥
ತತಃ ಶೇಷೇ ಗತೇ ಮುಕ್ತ್ವಾ ಜಯತೀರ್ಥೋ ಯದೃಚ್ಛಯಾ ।
ಮಹತ್ಯಾ ಜ್ಞಾನಸಂಪತ್ತ್ಯಾ ಪರಿಪೂರ್ಣಸ್ತದಾಽಭವತ್ ॥

– ದೈವಜ್ಞಭೀಮಾಚಾರ್ಯರು (ಪೂರ್ಣಬೋಧಗುರುವಂಶಕಥಾಕಲ್ಪತರು - ೬/೫೪)

೨. ಈ ಯರಗೋಳವು ಪುರಾಣಪ್ರಸಿದ್ಧವಾದ ಪುಣ್ಯಕ್ಷೇತ್ರ. ಸ್ಕಾಂದಪುರಾಣದ ಉಲ್ಲೇಖದಂತೆ ಶಂಖ ಎಂಬ ಒಬ್ಬ ವ್ಯಾಧ ಇಲ್ಲಿ ಶ್ರೀಹರಿಯನ್ನು ವಿಶೇಷವಾಗಿ ಆರಾಧಿಸಿ ಸದ್ಗತಿ ಪಡೆದ ಎಂದು ತಿಳಿಯುವುದು. ಅದರ

ವಿಶಾಲವಾದ ಗುಹೆ. ಪುರಾಣಕಾಲದ ಶಂಖ ಎಂಬ ಮುನಿಯ ತಪೋಭೂಮಿಯಾಗಿದ್ದ ಪವಿತ್ರಸ್ಥಳ. ಶಿಷ್ಯಸಮೇತರಾಗಿ ಶ್ರೀಜಯತೀರ್ಥರು ಅಲ್ಲಿಗೆ ತೆರಳಿದರು. ಗುಹೆಯ ಕತ್ತಲಲ್ಲಿ ಅವರ ಗ್ರಂಥರಚನೆಯ ಕಾರ್ಯ ಪ್ರಾರಂಭವಾಯಿತು. ಬೆಳಕು ಚೆಲ್ಲುವ ವಾಙ್ಮಯಸೇವೆಗೆ ಕತ್ತಲೆ ಬೆಳಕಾಯಿತು. ಹಗಲುರಾತ್ರಿಗಳು ಕಳೆಯತೊಡಗಿದವು. ಗ್ರಂಥಗಳೂ ಬೆಳೆಯ-ತೊಡಗಿದವು. ಶ್ರೀಮದಾಚಾರ್ಯರ ಗ್ರಂಥಗಳನ್ನು ಅವರ ಬಾಯಿಂದಲೇ ಕೇಳಿದ್ದ ಅವರಿಗೆ ಅದರಲ್ಲಿನ ಅರ್ಥಗಳು ಎದುರಿಗೆ ಕಾಣತೊಡಗಿದವು; ಅಕ್ಷರಾಭಿಮಾನಿದೇವತೆಗಳು ಕಣ್ಮುಂದೆ ಕುಣಿಯತೊಡಗಿದರು. ಕುಣಿಯುತ್ತಲೇ ಗ್ರಂಥಗಳಲ್ಲಿ ಅಕ್ಷರರೂಪದಲ್ಲಿ ಮೂಡತೊಡಗಿದವು. ಕಂಡು ನಲಿಯುವ ಭಾಗ್ಯ ಶ್ರೀಜಯತೀರ್ಥರದಾಯಿತು. ಅಂತಹ ಗುರುಗಳನ್ನು ಆರಾಧಿಸುವ ಭಾಗ್ಯ ಅವರ ಶಿಷ್ಯರದಾಯಿತು. ಇಂದಿಗೂ ನಿರ್ಜನವೆನ್ನಿಸುವ ಯರಗೋಳದ ಆ ಪ್ರಾಂತ ಅಂದಂತೂ ಅತ್ಯಂತ ಏಕಾಂತಸ್ಥಳ. ಅಲ್ಲಿಯ ಗುಹೆ ಶ್ರೀಜಯತೀರ್ಥರ ಪಾಲಿಗೆ ಹೃದಯಗುಹೆಯಾಯಿತು. ಅಲ್ಲಿಯ ಕತ್ತಲೆ ಜ್ಞಾನಜ್ಯೋತಿಯಾಯಿತು. ಅಲ್ಲಿಂದ ಮೂಡಿದ ಬೆಳಕು ಆಚಾರ್ಯರ ಹೃದಯವನ್ನು ತೆರೆದು ತೋರಿಸುವ ಜ್ಞಾನದೀವಿಗೆಯಾಯಿತು.

ಆ ಮುಂಚಿತವಾಗಿ ಶ್ರೀಮದಾಚಾರ್ಯರ ಅನೇಕ ಕೃತಿಗಳ ಮೇಲೆ ವ್ಯಾಖ್ಯಾನಗಳು ರಚಿತ-ವಾಗಿದ್ದವು. ಅವುಗಳಲ್ಲಿ ಶ್ರೀಪದ್ಮನಾಭತೀರ್ಥರ ಸತ್ತರ್ಕದೀಪಾವಲಿ (ಬ್ರಹ್ಮಸೂತ್ರಭಾಷ್ಯದ ಟೀಕೆ), ಸನ್ನ್ಯಾಯರತ್ನಾವಲಿ(ಅನುವ್ಯಾಖ್ಯಾನಟೀಕೆ), ಭಾವಪ್ರದೀಪಿಕಾ (ಗೀತಾಭಾಷ್ಯಟೀಕಾ), ಪ್ರಕಾಶಿಕಾ (ಗೀತಾತಾತ್ಪರ್ಯಟೀಕಾ), ದಶಪ್ರಕರಣಟೀಕೆಗಳು, ಶ್ರೀತ್ರಿವಿಕ್ರಮಪಂಡಿತರ ತತ್ತ್ವಪ್ರದೀಪ (ಬ್ರಹ್ಮಸೂತ್ರಭಾಷ್ಯಟೀಕಾ), ಶ್ರೀನರಹರಿತೀರ್ಥರ ಭಾವದೀಪಿಕಾ (ಗೀತಾಭಾಷ್ಯ-ಟೀಕಾ), ದಶಪ್ರಕರಣಟೀಕೆಗಳು, ಯಮಕಭಾರತಟೀಕೆಗಳು, ಶ್ರೀನಾರಾಯಣಪಂಡಿತರ ನಯಚಂದ್ರಿಕಾ (ಅನುವ್ಯಾಖ್ಯಾನಟೀಕೆ) ಇವು ಪ್ರಧಾನ[೧]. ಇವೆಲ್ಲವೂ 'ಪ್ರಾಚೀನ ಟೀಕೆ'ಗಳೆಂದೇ

---

ಸ್ಮಾರಕವೆಂಬಂತೆ ಇದರ ಬಳಿ ಸಂಕನೂರು ಎಂಬ ಚಿಕ್ಕ ಗ್ರಾಮ ಒಂದು ಉಳಿದುಕೊಂಡಿದೆ. ಇದು ಶಂಖನೂರು ಎಂಬುದರ ತದ್ಭವರೂಪ ಎಂಬುದು ಸ್ಪಷ್ಟ. ಇದು ಗುಡ್ಡಗಾಡುಗಳ ಪ್ರದೇಶವಾಗಿದ್ದು, ಇಂದಿಗೂ ಸಹ ಹುಲಿ ಮೊದಲಾದ ಹಿಂಸ್ರಪ್ರಾಣಿಗಳಿಗೂ ಬೀಡೆನ್ನಿಸಿರುವ ಸ್ಥಳ. ಇಂದಿಗೂ ದುರ್ಗಮವೆನ್ನಿಸಿರುವ ಇಂತಹ ಸ್ಥಳದಲ್ಲಿ ಶ್ರೀಜಯತೀರ್ಥರು ಅದರಲ್ಲಿಯೂ ದುರ್ಗಮವೆನ್ನಿಸಿರುವ ಗುಹೆಯೊಂದರಲ್ಲಿ ನೆಲೆಸಿ ಟೀಕೆಗಳನ್ನು ರಚಿಸಿದ್ದು ಅತ್ಯಂತ ಆಚ್ಚರಿಗಳಲ್ಲೊಂದು. ಈ ಬೆಟ್ಟದ ಮೇಲಿನ ಗರುಡನ ಕೊಕ್ಕಿನ ಆಕಾರದ ಒಂದು ಅತ್ಯಂತ ಎತ್ತರದ ಬಂಡೆಯ ಮೇಲೆ ಶ್ರೀಜಯತೀರ್ಥರು ಸ್ವಲ್ಪಕಾಲ ಮಾತ್ರ ನಿಂತು ಆ ಸುತ್ತಮುತ್ತಲಿನ ಜನಗಳಿಗೆ ದರ್ಶನನೀಡುತ್ತಿದ್ದರು ಎಂದು ಪ್ರತೀತಿ. ದೇವತೆಗಳು ಸಹಜವಾಗಿಯೇ ಪರೋಕ್ಷಪ್ರಿಯರು. ಶ್ರೀಜಯತೀರ್ಥರಂತೂ ದೇವಶ್ರೇಷ್ಠರ ಸಾಲಿಗೆ ಸೇರಿದವರು. ಅದರಿಂದಾಗಿ ಅವರು ಹೆಚ್ಚಾಗಿ ಜನರ ಸಂಪರ್ಕಕ್ಕೆ ಬರುತ್ತಿರಲಿಲ್ಲ. ಆದರೂ ಕೇವಲ ಕಾರುಣ್ಯದಿಂದಾಗಿ ಹಾಗೆ ದರ್ಶನನೀಡುವ ಮೂಲಕ ಅವರ ಉದ್ಧಾರಕ್ಕೆ ಕಾರಣವಾಗಿದ್ದರು ಎಂದು ತಿಳಿಯಬಹುದು.

೧. ಶ್ರೀನಾರಾಯಣಪಂಡಿತರ ಪುತ್ರ ವಾಮನಪಂಡಿತರ ಆನಂದಮಾಲಾ (ಅಣುಭಾಷ್ಯಟೀಕಾ) ಹಾಗೂ ಉಪನಿಷದ್ಭಾಷ್ಯಟೀಕೆಗಳು ಪ್ರಾಯಃ ಶ್ರೀಜಯತೀರ್ಥರ ಸಮಕಾಲಿಕರಚನೆಗಳು.

ಪ್ರಸಿದ್ಧವಾದ ಮಹತ್ತ್ವದ ಕೃತಿಗಳು. ಇವುಗಳೆಲ್ಲ ಆ ಕಾಲದ ಜನರ ಅಧ್ಯಯನಕ್ಕೆ ಅನುಗುಣವಾಗಿ ರಚಿತವಾಗಿದ್ದ ಕೃತಿಗಳು. ಆಗಿನ್ನೂ ಶ್ರೀಮದಾಚಾರ್ಯರ ಮುಖದಿಂದಲೇ ಪಾಠಕೇಳಿದ ಜನರೇ ಪಾಠಪ್ರವಚನಗಳಲ್ಲಿ ನಿರತರಾಗಿದ್ದ ಕಾಲ. ಅದರಿಂದಾಗಿ ಈ ಕೃತಿಗಳಲ್ಲಿನ ವಿವರಣೆ ಹೆಚ್ಚಿನ ವಿಷಯಗಳನ್ನು ಅರಿಯಲು ಸಾಕೆನ್ನಿಸುತ್ತಿದ್ದವು. ಆದರೆ ಶ್ರೀಜಯತೀರ್ಥರ ಕಾಲದ ಹೊತ್ತಿಗೆ ಸಾಕ್ಷಾಚ್ಛಿಷ್ಯವರ್ಗವೆಲ್ಲ ಪ್ರಾಯಃ ಮರೆಯಾಗಿ ಆಚಾರ್ಯರ ಉಪದೇಶದ ಮೌಖಿಕ ಪರಂಪರೆ ಜನಗಳಿಗೆ ಅಲಭ್ಯವೆನ್ನಿಸುವ ಸನ್ನಿವೇಶ ಒದಗಿತ್ತು. ಹೀಗಾಗಿ ಅವುಗಳನ್ನೊಳಗೊಂಡಂತಹ ವಿಸ್ತೃತಟೀಕೆಗಳ ಆವಶ್ಯಕತೆ ಸಹಜವಾಗಿಯೇ ಉದ್ಭವಿಸಿತ್ತು. ಅದರೊಂದಿಗೆ ಆ ವೇಳೆಗೆ ಪರಮತದವರು ಎತ್ತಿದ ಹಾಗೂ ಎತ್ತಬಹುದಾದ ಅನೇಕ ಆಕ್ಷೇಪಗಳಿಗೆ ಶ್ರೀಮದಾಚಾರ್ಯರು ನೀಡಿದ ಉತ್ತರಗಳನ್ನು ವಿವರಿಸಿ, ಪ್ರಕಾಶಪಡಿಸುವ ಸನ್ನಿವೇಶವೂ ಉಂಟಾಗಿತ್ತು. ಜೊತೆಗೆ ಶ್ರೀಮದಾಚಾರ್ಯರ ಕೃತಿಗಳ ವಿಶಿಷ್ಟಗಾಂಭೀರ್ಯವನ್ನು ಪರಕೀಯಭಾಷ್ಯಗಳ ಹಿನ್ನೆಲೆಯಲ್ಲಿ ವಿಮರ್ಶಿಸಿ, ಜಿಜ್ಞಾಸುಗಳ ಜ್ಞಾನಪರಿಧಿಯನ್ನು ವಿಸ್ತಾರಗೊಳಿಸುವ ವಿವರಣೆಯೂ ಅಪೇಕ್ಷಿತವಾಗಿತ್ತು. ಅನೇಕ ಕಡೆ ಶ್ರೀಮದಾಚಾರ್ಯರ ಸಂಕ್ಷಿಪ್ತವಿವೇಚನೆಗಳನ್ನು ವಿಸ್ತರಿಸಿ, ಪ್ರತಿಪಾದಿಸುವ ಮಹತ್ಕಾರ್ಯವೂ ಆಗಬೇಕಿತ್ತು. ಈ ಹಿನ್ನೆಲೆಯಲ್ಲಿ ಶ್ರೀಜಯತೀರ್ಥರ ಕೃತಿಗಳು ರಚಿತವಾಗತೊಡಗಿದವು.

ಪ್ರತಿನಿತ್ಯ ಶಿಷ್ಯರು ಆ ಗ್ರಾಮದ ಅಗ್ರಹಾರದಲ್ಲಿ ಮಧುಕರವೃತ್ತಿಯಿಂದ ತರುತ್ತಿದ್ದ ಜೋಳದ ನುಚ್ಚು ಹಿಟ್ಟುಗಳೇ ಅವರ ಆಹಾರ[೧]. ಮಿತಾಹಾರದಿಂದ ವಿದ್ಯೆ, ಅಮಿತಾಹಾರದಿಂದ ನಿದ್ರೆ ಎಂಬುದೇ ಶಾಸ್ತ್ರದ ಘೋಷಣೆ. ಅವರ ಆಹಾರ ಮಿತವಾಗಿತ್ತು; ವಿಚಾರ ಅಮಿತವಾಗಿತ್ತು. ಆದ್ದರಿಂದಲೇ ಅದರಿಂದ ಸಿಕ್ಕುವ ತೃಪ್ತಿಯೂ ಅನಂತವಾಗಿತ್ತು.

ಒಂದಾದ ಮೇಲೊಂದರಂತೆ ಟೀಕೆಗಳು ರಚಿತವಾಗತೊಡಗಿದವು. ತತ್ತ್ವಸಂಖ್ಯಾನಾದಿದಶಪ್ರಕರಣಗಳಿಗೂ ಟೀಕೆ ಪೂರೈಸಿದರು.

ಅವರ ಮುಖ್ಯವಾದ ಕಾರ್ಯ ಸೂತ್ರಪ್ರಸ್ಥಾನದಕೃತಿಗಳನ್ನು ವ್ಯಾಖ್ಯಾನಿಸುವುದಾಗಿತ್ತು. ಶ್ರೀಮಧ್ವರ ಬ್ರಹ್ಮಸೂತ್ರಭಾಷ್ಯ, ಅದರ ಮೇಲೆ ಅವರೇ ರಚಿಸಿದ ಅನುವ್ಯಾಖ್ಯಾನ ಎಂಬ ಅನುಭಾಷ್ಯ ಮತ್ತು ನ್ಯಾಯವಿವರಣ ಕೃತಿಗಳಿಗೆ ಅವರು ಟೀಕೆ ರಚಿಸಿದರು. ಬ್ರಹ್ಮಸೂತ್ರಭಾಷ್ಯದಮೇಲಿನ ಟೀಕೆ ತತ್ತ್ವಪ್ರಕಾಶಿಕೆ ಎಂಬುದಾಗಿಯೂ, ಅನುವ್ಯಾಖ್ಯಾನದ ಮೇಲಿನ ಟೀಕೆ ನ್ಯಾಯಸುಧೆ ಎಂಬುದಾಗಿಯೂ ಪ್ರಸಿದ್ಧವಾಗಿದ್ದು, ಸೂತ್ರಪ್ರಸ್ಥಾನದ ಕೃತಿಗಳ ವಿಶ್ವರೂಪದರ್ಶನ ಮಾಡಿಸುವ ಅಪೂರ್ವ ದಿವ್ಯನೇತ್ರಗಳೆನ್ನಿಸಿವೆ. ಅಧಿಕರಣವಿಶ್ಲೇಷಣೆಯ ಕ್ರಮದಲ್ಲಿ ಸಮಗ್ರ-

---

೧. ಘಂಟಾಂ ಪೂಗೀಫಲಂ ಚೇತ್ಯುಭಯಮಪಿ ತತಃ ಪ್ರಾಪ್ಯ ಮಧ್ವಾಗಮಾಂಸ್ತು
ವ್ಯಾಕುರ್ವನ್ ಗ್ರಾಮಮೇಕಂ ಯರಗುಳ ಇತಿ ಚಾಖ್ಯಾಯುತಂ ಪ್ರಾಪ್ಯ ಶೈಲೇ ।
ತತ್ರಾಂತಃಸ್ಥೋಽಥ ದರ್ಯಾಂ ರಘುಪತಿಮನಿಶಂ ಪೂಜಯನ್ನಂಬುಪತ್ಯೈ-
ರನ್ನಾಚ್ಛಿಷ್ಯೋಽಪನೀತಾದ್ಯತಿವರತಿಲಕೋ ಯಾವನಾಳಾದುವಾಸ ॥–ಅಣುಜಯತೀರ್ಥವಿಜಯ (೧೭)

ಸೂತ್ರಭಾಷ್ಯವನ್ನು ವ್ಯಾಖ್ಯಾನಿಸುವುದು ತತ್ತ್ವಪ್ರಕಾಶಿಕೆಯ ವೈಶಿಷ್ಟ್ಯ. ಆ ಮುಂಚಿನ ಶ್ರೀಪದ್ಮನಾಭತೀರ್ಥರ ಸತ್ತರ್ಕದೀಪಾವಲೀ ಹಾಗೂ ಶ್ರೀತ್ರಿವಿಕ್ರಮಪಂಡಿತರ ತತ್ತ್ವಪ್ರದೀಪಕ್ಕಿಂತ ವಿಭಿನ್ನವಾದ ಕ್ರಮದಲ್ಲಿ ಬ್ರಹ್ಮಸೂತ್ರಭಾಷ್ಯವನ್ನು ವಿಶ್ಲೇಷಿಸಿದ್ದು ಅದರ ಹಿರಿಮೆ. ನ್ಯಾಯಸುಧೆಯಂತೂ ಶ್ರೀಜಯತೀರ್ಥರ ಮೇರುಕೃತಿ ಎನ್ನಿಸಿದೆ. ಅವರ ಸಮಗ್ರಶಾಸ್ತ್ರಪಾಂಡಿತ್ಯಕ್ಕೂ ವಿಶ್ಲೇಷಣಾವೈಖರಿ ಹಾಗೂ ವಿಮರ್ಶನಚಾತುರ್ಯಕ್ಕೆ ಇದು ಶ್ರೇಷ್ಠನಿದರ್ಶನ. ಸಮಗ್ರದಾರ್ಶನಿಕವಾಙ್ಮಯಪ್ರಪಂಚದಲ್ಲಿಯೇ ಈ ಬಗೆಯ ಪರಿಪೂರ್ಣತೆಯ ಮತ್ತೊಂದು ಟೀಕೆಯನ್ನು ಕಾಣಲು ಸಾಧ್ಯವಾಗುವುದಿಲ್ಲ.

ಮುಂದೆ ಗೀತಾಭಾಷ್ಯ, ಗೀತಾತಾತ್ಪರ್ಯಗಳಿಗೆ ವ್ಯಾಖ್ಯಾನ. ಅರ್ಜುನನಾಗಿದ್ದಾಗ ಭಗವಂತನಿಂದ ಕೇಳಿದ ಭಗವದ್ಗೀತೆಯ ಅರ್ಥವಿಶೇಷಗಳನ್ನು ಭಗವತ್ಪಾದರ ಭಾಷ್ಯತಾತ್ಪರ್ಯಗಳಿಂದ ಅರಿಯತೊಡಗಿದರು. ಗೀತೋಪದೇಶ ಕಾಲಕ್ಕೆ ಅರ್ಜುನನ ರಥದ ಮೇಲೆ ಕುಳಿತು ಕೇಳಿದ್ದ ಹನುಮಂತ ಮಧ್ವರೂಪದಿಂದ ಭಾಷ್ಯತಾತ್ಪರ್ಯಗಳನ್ನು ಬರೆದಿದ್ದರೆ, ಗೀತೆ ಕೇಳಿದ್ದ ಅರ್ಜುನ ಅದಕ್ಕೆ ಟೀಕೆ ಬರೆಯತೊಡಗಿದ. ಅರ್ಜುನನಾಗಿದ್ದಾಗ ಕೃಷ್ಣನಿಂದ ಗೀತೆ ಕೇಳುವ ಅವಕಾಶ; ಎತ್ತಾಗಿದ್ದಾಗ ಶ್ರೀಮಧ್ವರೂಪದ ಭೀಮಸೇನನಿಂದ ಅದರ ಭಾಷ್ಯ ಕೇಳುವ ಸುಕೃತ; ಅದಕ್ಕೆಂದೇ ಶ್ರೀಜಯತೀರ್ಥರಾಗಿ ಅದಕ್ಕೆ ಟೀಕೆ ಬರೆಯುವ ಇಂತಹ ಸುಯೋಗ.

ಶ್ರೀಮದಾಚಾರ್ಯರ ಋಗ್ಭಾಷ್ಯ ವಿನೂತನ ಶೈಲಿಯ ಕೃತಿ. ಋಗ್ವೇದದ ಮೇಲೆ ಶ್ಲೋಕರೂಪದಲ್ಲಿ ರಚಿತವಾಗಿರುವ ಏಕೈಕ ಆಧ್ಯಾತ್ಮಿಕಭಾಷ್ಯ. ಶೈಲಿಯಂತೆಯೇ ಅದರಲ್ಲಿಯ ವಿಷಯಗಳೂ ಅತ್ಯಂತ ಅಪೂರ್ವ. ಋಗ್ವೇದದ ಮೊದಲ ಮೂರು ಅಧ್ಯಾಯಗಳ ಒಟ್ಟು ನಲವತ್ತು ಸೂಕ್ತಗಳಿಗೆ ಮಾತ್ರ ರಚಿತವಾಗಿದ್ದರೂ, ವೇದಾರ್ಥಪರಿಜ್ಞಾನಕ್ಕೆ ಅದು ನೀಡುವ ನೆರವು ಅಪಾರವಾದುದು. ನಿರ್ವಚನಕ್ರಮದಲ್ಲಿ ವೈದಿಕಪದಗಳಿಗೆ ಅವರು ನೀಡುವ ಅರ್ಥ ಅದಕ್ಕೆ ಸಂವಾದಿಯಾಗಿ ಅವರು ಉದಾಹರಿಸುವ ವ್ಯಾಸನಿರುಕ್ತ ಮೊದಲಾದ ಅಪೂರ್ವ ಕೃತಿಗಳು, ಮಹಾವ್ಯಾಕರಣದ ಸೂತ್ರಗಳು ಮೊದಲಾದ ಕಾರಣಗಳಿಂದ ಋಗ್ಭಾಷ್ಯ ಅಪೂರ್ವವಾಗಿರುವಂತೆಯೇ ತುಂಬ ಜಟಿಲವೂ ಆಗಿದೆ. ಶ್ರೀಜಯತೀರ್ಥರ ಕಾಲಕ್ಕಿಂತ ಮುಂಚಿತವಾಗಿ ಆಚಾರ್ಯರ ದಶಪ್ರಕರಣಗಳು, ಗೀತಾಭಾಷ್ಯ, ಉಪನಿಷದ್ಭಾಷ್ಯಗಳು ಮೊದಲಾದ ಗ್ರಂಥಗಳಿಗೆ ಸಂಕ್ಷಿಪ್ತವಾಗಿದ್ದರೂ, ಉಪಯುಕ್ತವೆನ್ನಿಸುವ ಟೀಕೆಗಳು ರಚಿತವಾಗಿದ್ದವು. ಆದರೆ ಋಗ್ಭಾಷ್ಯದ ಮೇಲೆ ಮಾತ್ರ ಅಂತಹ ಯಾವ ಬಗೆಯ ಟೀಕೆಯೂ ಆ ಮುಂಚಿತವಾಗಿ ರಚಿತವಾದ ಉಲ್ಲೇಖ ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ಶ್ರೀಜಯತೀರ್ಥರಿಗೆ ಅದರ ಮೇಲೆ ಟೀಕೆ ಬರೆಯುವ ಸಂಪೂರ್ಣ ಹೊಣೆಗಾರಿಗೆ ಬಿದ್ದಿದ್ದಿತು. ಅದಕ್ಕಾಗಿ ಶ್ರೀಜಯತೀರ್ಥರು ರಚಿಸಿದ ಋಗ್ಭಾಷ್ಯಟೀಕೆ ಸಂಬಂಧದೀಪಿಕೆ ಎನ್ನಿಸಿ ಮಾನ್ಯವಾಯಿತು. ಈ ಟೀಕೆಯಿಂದ ಋಗ್ಭಾಷ್ಯವನ್ನು ಅರ್ಥೈಸಿಕೊಳ್ಳುವ ಮೂಲಕ ಋಗ್ವೇದದ ಆಂತರ್ಯವನ್ನು ಅರಿಯಲು ಜಿಜ್ಞಾಸುಗಳಿಗೆ ಸಾಧ್ಯವಾಗುತ್ತದೆ. ಅವರ ಅದ್ಭುತವಾದಂತಹ ವೈದಿಕಸಾಹಿತ್ಯದ ತಲಸ್ಪರ್ಶಿಪಾಂಡಿತ್ಯಕ್ಕೂ ಇದೊಂದು ಶ್ರೇಷ್ಠನಿದರ್ಶನ.

ಅನಂತರದ ಗ್ರಂಥಗಳು ಉಪನಿಷತ್ಪ್ರಸ್ಥಾನದ ಟೀಕೆಗಳು. ಯಾಜ್ಞೀಯೋಪನಿಷತ್ತೆನ್ನಿಸಿದ ಈಶಾವಾಸ್ಯ, ವಿಶೇಷವಾಗಿ ವಾಯುಮಾಹಾತ್ಮ್ಯಪ್ರತಿಪಾದಕವಾಗಿರುವ ಷಟ್ಪ್ರಶ್ನ ಎರಡು ಉಪನಿಷತ್ತುಗಳಿಗೂ ಟೀಕೆಗಳು ಪೂರೈಸಿದವು. ಆ ವೇಳೆಗೆ ಆಶ್ಚರ್ಯವೊಂದು ನಡೆಯಿತು. ಅವರ ಪ್ರಿಯಶಿಷ್ಯರೆನ್ನಿಸಿ, ಅವರ ಬಳಿ ಅಧ್ಯಯನ ಮಾಡುತ್ತಿದ್ದ ಶ್ರೀವ್ಯಾಸತೀರ್ಥರು ಎಂಬವರು ಅವರ ಬಳಿಗೆ ವಿನಯದಿಂದ ಸಮೀಪಿಸಿ, ಗ್ರಂಥವೊಂದನ್ನು ಮುಂದಿಟ್ಟು ಸಾಷ್ಟಾಂಗ ವಂದಿಸಿದರು. ಅವುಗಳನ್ನು ಅವಲೋಕಿಸಿ, ಅನುಗ್ರಹಿಸಲು ಪ್ರಾರ್ಥಿಸಿದರು. ಪ್ರೀತಿಯಿಂದ ಶ್ರೀಜಯತೀರ್ಥರು ಅದನ್ನು ಕೈಗೆತ್ತಿಕೊಂಡರು. ಅವರಿಗೆ ಆಶ್ಚರ್ಯ, ಆನಂದಗಳು ಏಕ-ಕಾಲದಲ್ಲಿ ಉಂಟಾದವು. ತಾವು ಬರೆಯಲು ಯೋಜಿಸಿದ್ದ ಉಳಿದ ಎಂಟೂ ಉಪನಿಷದ್ಭಾಷ್ಯಗಳ ಟೀಕೆ ತಮ್ಮ ಮುಂದಿದೆ. ಅದನ್ನು ಬರೆದವರು ತಮ್ಮ ಪ್ರಿಯಶಿಷ್ಯ. ಮಾತುಗಳೆಲ್ಲ ತಾವು ಪಾಠಕಾಲಕ್ಕೆ ಉಪದೇಶಿಸಿದ್ದವುಗಳೇ. ಮಿತಶಬ್ದಗಳಲ್ಲಿ ಅಮಿತಅರ್ಥಸಂಪತ್ತು. ತುಂಬಾ ಆನಂದಪಟ್ಟು ಅನುಗ್ರಹಿಸಿದರು. 'ನಮ್ಮ ಕಲ್ಪನೆಗೆ ಅನುಗುಣವಾಗಿಯೇ ನಿಮ್ಮ ಟೀಕೆಗಳು ಮೂಡಿಬಂದಿವೆ. ನಮಗೆ ತೃಪ್ತಿ ನೀಡಿವೆ. ನಿಮ್ಮ ಈ ಟೀಕೆಗಳೇ ಪ್ರಸಾರಕ್ಕೆ ಬರಲಿ. ನಾವು ಪ್ರತ್ಯೇಕ ಬರೆಯುವ ಅವಶ್ಯಕತೆ ಇಲ್ಲ'[೧]. ಗುರುಗಳಿಗೆ ಶಿಷ್ಯಭಕ್ತಿ ಪ್ರಿಯವೆನ್ನಿಸಿದರೆ, ಶಿಷ್ಯರಿಗೆ ಗುರ್ವನುಗ್ರಹ ಪ್ರಿಯವೆನ್ನಿಸಿತು. ಅದರ ಫಲವಾಗಿ ಇಂದೂ ಆ ಟೀಕೆಗಳಿಗೆ ಮಾನ್ಯತೆ ಉಳಿದು ಬಂದಿದೆ. ಶ್ರೀವ್ಯಾಸತೀರ್ಥರ ಹೆಸರೂ ಅಜರಾಮರವಾಯಿತು.

ಈ ರೀತಿಯಾಗಿ ಸರ್ವಮೂಲವೆಂದು ಪ್ರಸಿದ್ಧವಾದ ಶ್ರೀಮಧ್ವಾಚಾರ್ಯರ ಮೂವತ್ತೇಳು ಗ್ರಂಥಗಳಲ್ಲಿ ಹದಿನೆಂಟು ಗ್ರಂಥಗಳಿಗೆ ಟೀಕಾರಚನೆಯನ್ನು ಪೂರೈಸಿದರು. ಜಯ(ಜ = ೮, ಯ = ೧; ಜಯ = ೧೮) ಎಂಬ ಅವರ ಹೆಸರಿನಲ್ಲಿಯೇ ಅವರು ಶ್ರೀಮದಾಚಾರ್ಯರ ಹದಿನೆಂಟು ಗ್ರಂಥಗಳಿಗೆ ಟೀಕೆ ರಚಿಸುವ ಮಹನೀಯರು ಎಂಬ ಅರ್ಥವು ಸೂಚಿತವಾಗಿರುವುದು ಗಮನಾರ್ಹವಾಗಿದೆ.

ಶ್ರೀಜಯತೀರ್ಥರು ಈ ಟೀಕಾಗ್ರಂಥಗಳೊಂದಿಗೆ ಮೂರು ಸ್ವತಂತ್ರಗ್ರಂಥಗಳನ್ನೂ ಸಹ ರಚಿಸಿದರು. **ಪ್ರಮಾಣಪದ್ಧತಿ, ವಾದಾವಲಿ** ಹಾಗೂ **ಪದ್ಯಮಾಲಾ** – ಇವು ಆ ಮೂರು ಸ್ವತಂತ್ರಗ್ರಂಥಗಳು. ಪ್ರಮಾಣಪದ್ಧತಿಯು ಶ್ರೀಮದಾಚಾರ್ಯರ ಪ್ರಮಾಣಲಕ್ಷಣ ಹಾಗೂ ಅನುವ್ಯಾಖ್ಯಾನಾದಿಗಳಲ್ಲಿ ಬಂದಿರುವ ವೈದಿಕಪ್ರಮಾಣಪರಿಭಾಷೆಯನ್ನು ಸಂಗ್ರಹಿಸಿಕೊಡುವ

---

೧. ಇತರೋಪನಿಷದ್ಭಾಷ್ಯಟೀಕಾಕೃತಿ ಸಯಾಚನೇ।
ಶಿಷ್ಯಾಯೇಽ ವ್ಯಾಸತೀರ್ಥಾಖ್ಯೇ ಟೀಕಾ ನಾಕೃತ ಸ ಸ್ವಯಮ್ ॥ – ಫ.ಜ.ವಿ. (೫/೫೯)
– ಆದರೆ ಶ್ರೀವ್ಯಾಸತೀರ್ಥರು ಈಶಾವಾಸ್ಯಭಾಷ್ಯ ಹಾಗೂ ಷಟ್ಪ್ರಶ್ನಭಾಷ್ಯಗಳಿಗೂ ಸಹ ಟೀಕೆಗಳನ್ನು ರಚಿಸಿರುವುದು ಉಡುಪಿಯ ಶ್ರೀಸೋದೆ ವಾದಿರಾಜಮಠದ ಗ್ರಂಥಾಗಾರದಲ್ಲಿನ ಕೃತಿಗಳಿಂದ ಸ್ಫುಟ-ಪಟ್ಟಿದೆ. ಇವುಗಳಲ್ಲಿ ಈಶಾವಾಸ್ಯೋಪನಿಷದ್ಭಾಷ್ಯಟೀಕೆಯನ್ನು ಸೋದೆ ಮಠದ ಪ್ರಾತಃಸ್ಮರಣೀಯರಾದ ಶ್ರೀವಿಷ್ಣೋತ್ತಮತೀರ್ಥರ ಅನುಗ್ರಹ ಆದೇಶಗಳಂತೆ ನಮ್ಮ ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನವು ಪ್ರಕಾಶನಪಡಿಸಿದೆ (೨೦೧೧).

ವಿಶಿಷ್ಟಕೃತಿ. ಮಧ್ವದರ್ಶನದ ಅಧ್ಯಯನಕ್ಕೆ ಇದೊಂದು ಪಾರಿಭಾಷಿಕ ಪ್ರಮಾಣಕೈಪಿಡಿಯಾಗಿದೆ. ವಾದಾವಲಿಯು ಖಂಡನತ್ರಯ, ತತ್ತ್ವೋದ್ಯೋತ ಹಾಗೂ ತತ್ವನಿರ್ಣಯಗಳಲ್ಲಿ ಶ್ರೀಮದಾ-ಚಾರ್ಯರು ಮಾಡಿರುವ ಮಾಯಾವಾದಮತವಿಮರ್ಶೆಯ ವಾಕ್ಯಾರ್ಥಸಂಗ್ರಹ. ಒಂದು ರೀತಿಯಲ್ಲಿ ಅದ್ವೈತದರ್ಶನದ ಸಮಗ್ರವಿಮರ್ಶೆ ಎನ್ನಿಸಿರುವ ಈ ಕೃತಿ, ಮುಂದೆ ಶ್ರೀವ್ಯಾಸ-ರಾಜರ ನ್ಯಾಯಾಮೃತರಚನೆಗೆ ಸ್ಫೂರ್ತಿಯಾದ ವಿಶಿಷ್ಟ ವಾದಗ್ರಂಥ.

ಪದ್ಯಮಾಲಾ ಕೃತಿಯು ಶ್ರೀಜಯತೀರ್ಥರ ಏಕೈಕ ಶ್ಲೋಕರೂಪಕೃತಿ. ಅದಕ್ಕಾಗಿಯೇ ಪದ್ಯಮಾಲಾ ಎಂಬ ಹೆಸರು ಅದಕ್ಕೆ ಸಾರ್ಥಕ. ಶ್ರೀಮದಾಚಾರ್ಯರ ತಂತ್ರಸಾರಸಂಗ್ರಹದಲ್ಲಿನ ಪ್ರಥಮಾಧ್ಯಾಯದಲ್ಲಿ ಬರುವ ದೇವಪೂಜಾಪದ್ಧತಿಯನ್ನು ಸಮಗ್ರವಾಗಿ ವಿವರಿಸುವ ವೈಶಿಷ್ಟ್ಯ ಇದರದು. ತಂತ್ರಸಾರಸಂಗ್ರಹದಲ್ಲಿನ ಆವಾಹನಕ್ರಮ, ಅಭಿಷೇಕಕ್ರಮ, ಆವರಣಪೂಜೆ, ನೈವೇದ್ಯಸಮರ್ಪಣೆ, ಧೂಪದೀಪಗಳ ಸಮರ್ಪಣೆ ಮೊದಲಾದವುಗಳ ಬಗ್ಗೆಯಂತೂ ಇದು ವ್ಯಾಖ್ಯಾನವೇ ಆಗಿದ್ದು ಆ ವಿಷಯಗಳ ಬಗ್ಗೆ ಅನಂತರದ ಅದಕ್ಕೆ ಸಂಬಂಧಿಸಿದ ಎಲ್ಲ ಗ್ರಂಥಗಳೂ ಇದನ್ನೇ ಆಧರಿಸಿವೆ ಎಂಬುದು ಇದರ ಹಿರಿಮೆಗೆ ಸಂದಿರುವ ಗೌರವ.

## ವಿದ್ಯಾರಣ್ಯರೂ ಮಣಿದ ವಿದ್ಯಾವೈಭವ

ಗ್ರಂಥರಚನೆಯ ಇಂತಹ ವೈಭವವನ್ನು ಬೇರಾವ ಗ್ರಂಥಕಾರರೂ ಈ ತೆರನಾಗಿ ಹೊಂದಿಲ್ಲ ಎಂಬುದು ಇವರ ಮಹತ್ತ್ವ. ಇವರು ಯರಗೋಳದಲ್ಲಿ ಗ್ರಂಥರಚನೆಯಲ್ಲಿ ಮಗ್ನರಾಗಿದ್ದಾಗ ನಡೆದ ಅಪೂರ್ವಪ್ರಸಂಗವೊಂದನ್ನು ಶ್ರೀಜಯತೀರ್ಥವಿಜಯಗಳು ದಾಖಲಿಸಿವೆ. ವಿದ್ಯಾರಣ್ಯರು ವಿಜಯನಗರದ ಅರಸರಿಂದ ವಿಶೇಷ ಮನ್ನಣೆ ಪಡೆದ ದಿಗ್ದಂತಿ ಪಂಡಿತರು. ಆ ಅರಸರು ಇವರ ಮೇಲಿದ್ದ ತಮ್ಮ ಗೌರವವನ್ನು ಸೂಚಿಸಲೆಂದು ಆನೆಯೊಂದರ ಮೇಲೆ ಇವರನ್ನು ದೇಶಪರ್ಯಟನೆಗೆ ಕಳುಹಿಸಿಕೊಟ್ಟಿದ್ದರಂತೆ. ಅವರು ಹಾಗೆ ಸಂಚರಿಸುತ್ತಾ, ಯರಗೋಳಪ್ರಾಂತವನ್ನು ಸಂದರ್ಶಿಸಿದಾಗ, ಅಲ್ಲಿ ಶ್ರೀಜಯತೀರ್ಥರು ಗ್ರಂಥರಚನೆಗೆ ತೊಡಗಿರುವ ವಿಷಯ ಕಿವಿಗೆ ಬಿದ್ದಿತು. ಶ್ರೀಜಯತೀರ್ಥರ ವೈದುಷ್ಯದ ಬಗ್ಗೆ ಆಗಲೇ ಸಾಕಷ್ಟು ಪ್ರಚಾರ ಒದಗಿತ್ತು. ಅವರ ವಾಙ್ಮಯತಪಸ್ಸಿನ ಬಗ್ಗೆಯೂ ಅವರು ಸಾಕಷ್ಟು ಕೇಳಿದ್ದರು. ಅವರು ಶ್ರೀಅಕ್ಷೋಭ್ಯತೀರ್ಥರ ಶಿಷ್ಯರು ಎಂಬುದಂತೂ ಅವರ ಕುತೂಹಲವನ್ನು ಮತ್ತಷ್ಟು ಹೆಚ್ಚಿಸಿತು. ತಮ್ಮನ್ನು 'ತತ್ತ್ವಮಸಿ' ವಾಕ್ಯಾರ್ಥದಲ್ಲಿ ಅಕ್ಷೋಭ್ಯತೀರ್ಥರು ಪರಾಭವಗೊಳಿಸಿದ ಪರಿ ಅವರ ಮನಸ್ಸಿನಲ್ಲಿ ಇನ್ನೂ ಹಚ್ಚಹಸಿರಾಗಿದ್ದಿತು. ಇಂತಹ ಪ್ರತಿಯೊಂದು ಕಾರಣದಿಂದಾಗಿ ಶ್ರೀಜಯತೀರ್ಥರು ಅವರ ಗಮನದ ಕೇಂದ್ರವ್ಯಕ್ತಿಗಳಾಗಿದ್ದರು. ಅವರಿರುವ ಪರಿಸರಕ್ಕೇ ತಾವು ಬಂದಿರುವದನ್ನು ಅರಿತಾಗಲಂತೂ ಅವರನ್ನು ಸಂದರ್ಶಿಸದೇ ಮುಂದಕ್ಕೆ ಸಾಗುವುದು ಅಸಾಧ್ಯವೆನ್ನಿಸಿತು. ಸಾಧ್ಯವಾದರೆ ಅವರನ್ನು ಗೆದ್ದು ಅಕ್ಷೋಭ್ಯತೀರ್ಥರಿಂದ ತಮಗಾದ ಪರಾಭವದ ಸೇಡನ್ನು ತೀರಿಸುವ ತವಕವೂ ಅವರಲ್ಲಿ ಮೂಡಿತ್ತು.

ಶ್ರೀಜಯತೀರ್ಥರಿರುವ ಗುಹೆಯ ವಿವರಗಳನ್ನು ಅಲ್ಲಿಯ ಜನರಿಂದ ಪಡೆದುಕೊಂಡ ಅವರು, ಅವರ ಸಂದರ್ಶನಕ್ಕೆಂದು ಸ್ವತಃ ಧಾವಿಸಿದರು. ಗುಹೆಯ ಬಳಿಗೆ ಬಂದಾಗ ಹೊರಗೆ ಅಲ್ಲಿ ಯಾರನ್ನೂ ಕಾಣದೆ, ಆ ಗುಹೆಯ ಬಾಗಿಲಲ್ಲಿ ನಿಂತು ಇಣುಕುತ್ತಾ **'ಅಂತಃ ಕಃ'** (ಒಳಗಿರುವವರು ಯಾರು?) ಎಂದು ಉಚ್ಚಧ್ವನಿಯಲ್ಲಿ ಪ್ರಶ್ನಿಸಿದರಂತೆ. ಅದಕ್ಕೆ ಪ್ರತಿ-ಧ್ವನಿಯಂತೆ ಶ್ರೀಜಯತೀರ್ಥರ **'ಅಹಂ'** ಎಂಬ ಮಾತು ಕೇಳಿಸಿತು[೧]. **'ಅಹಂ ಬ್ರಹ್ಮಾಸ್ಮಿ'** ಎಂಬುದನ್ನು ಜೀವೈಕ್ಯಪರವೆಂಬುದಾಗಿ ವಾದಿಸುವ ವಿದ್ಯಾರಣ್ಯರಿಗೆ **'ಅಹಂ'** ಎಂಬ ಆತ್ಮ-ವಿಶ್ವಾಸದ ಆ ಮಾತು ಸವಾಲಿನಂತೆ ಕಂಡುಬಂದಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆ ವೇಳೆಗೆ ಶ್ರೀಜಯತೀರ್ಥರು ಕಳುಹಿಸಿದ ಶಿಷ್ಯರಿಂದ ಆಮಂತ್ರಿತರಾಗಿ ಗುಹೆಯೊಳಕ್ಕೆ ಪ್ರವೇಶಿಸಿದರು. ಅಲ್ಲಿಯ ತಪೋಮಯ ಪರಿಸರ, ಅಪಾರವಾಙ್ಮಯರಾಶಿ ಹಾಗೂ ಶ್ರೀಜಯತೀರ್ಥರ ಗ್ರಂಥರಚನೆಯ ತಪಸ್ಸುಗಳನ್ನು ಕಂಡು ಕ್ಷಣಕಾಲ ವಿದ್ಯಾರಣ್ಯರಂತಹ ವಿದ್ವಾಂಸರೂ ಮೆಚ್ಚಿಗೆ-ಯಿಂದ ಮೈಮರೆತರು.

ಪರಸ್ಪರ ಕುಶಲಪ್ರಶ್ನೆಯ ಅನಂತರ ವಿದ್ಯಾರಣ್ಯರು ಶ್ರೀಜಯತೀರ್ಥರ ಗ್ರಂಥರಚನೆಯ ಬಗ್ಗೆ ವಿವರಗಳನ್ನು ತಿಳಿಯುವ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಅದು ಶ್ರೀಜಯತೀರ್ಥರು ಶ್ರೀಮದಾಚಾರ್ಯರ ಪ್ರಮಾಣಲಕ್ಷಣಕೃತಿಗೆ ವ್ಯಾಖ್ಯಾನ ಬರೆಯುತ್ತಿದ್ದ ಸಮಯ. ಆದ್ದರಿಂದ ಅವರು ಸಹಜವಾಗಿಯೇ ಪ್ರಮಾಣಲಕ್ಷಣ ಮೂಲವನ್ನು ಅವರ ಕೈಗಿತ್ತರು. ಅದನ್ನು ಸಾವಧಾನದಿಂದ ಪರಿಶೀಲಿಸಿದ ವಿದ್ಯಾರಣ್ಯರು ಅದರ ಭಾವವನ್ನು ಗ್ರಹಿಸಲು ಅಸಮರ್ಥರಾಗಿ **'ಬಾಲವಾಕ್ಯೇನ ಕಿಂ ಮೇ'** ಎನ್ನುತ್ತಾ ಅದನ್ನು ಶ್ರೀಜಯತೀರ್ಥರಿಗೆ ಹಿಂದಿರುಗಿಸಿದರಂತೆ. ಅಂತಹ ಅಪ್ರಸಕ್ತಟೀಕೆಯನ್ನು ಸಹಿಸದೆ ಕೆರಳಿದ ಜಯತೀರ್ಥರು ಅದು ಬಾಲವಾಕ್ಯವಲ್ಲ; ಅದನ್ನು ಅರಿಯಲಾಗದ ನಿಮ್ಮ ಬುದ್ಧಿಯೇ ಬಾಲಬುದ್ಧಿ (**'ಬಾಲಬುದ್ಧಿಸ್ತ್ವಮೇವ'**) ಎಂದು ಪ್ರತಿಕ್ರಿಯಿಸಿದರು. ತಬ್ಬಿಬ್ಬಾದ ವಿದ್ಯಾರಣ್ಯರು ಅದಕ್ಕೆ ಕಾರಣ ತಿಳಿಯಬಯಸಿದಾಗ, ಶ್ರೀಜಯತೀರ್ಥರು ಅದರ ಅರ್ಥಪ್ರಕಾಶನಕ್ಕಾಗಿ ತಾವು ಬರೆದಿದ್ದ ನ್ಯಾಯಕಲ್ಪಲತಾ ಎಂಬ ಟೀಕೆಯನ್ನು ಅವರ ಮುಂದಿಟ್ಟರಂತೆ. ಅದನ್ನು ಓದುತ್ತಾ ಹೋದಂತೆ ಶ್ರೀಮದಾಚಾರ್ಯರ ಗ್ರಂಥದ ಅದ್ಭುತಗಾಂಭೀರ್ಯದೊಂದಿಗೆ ಅದನ್ನು ವಿಶ್ಲೇಷಿಸುವ ಶ್ರೀಜಯತೀರ್ಥರ ವಿದ್ವತ್ತೂ ಸಹ ಪರಿಚಿತವಾಗಿ ಅವರು ಆಶ್ಚರ್ಯಪಟ್ಟರು. **'ವಿದ್ವಾನೇವ ವಿಜಾನಾತಿ ವಿದ್ವಜ್ಜನ-ಪರಿಶ್ರಮಮ್'** ಎಂಬ ಮಾತಿನಂತೆ ವಿದ್ವಜ್ಜನರ ಪರಿಶ್ರಮದ ಮಹತ್ತ್ವ ತಿಳಿಯುವುದು

---

೧. ವಾದಿನಾಽಂತಃ ಕ ಇತ್ಯುಕ್ತೇ ವಾಚಾಽಹಮಿತಿ ಪ್ರತ್ಯುಕ್ತೇ ।
ಮೋದಂ ಪ್ರಾಪ್ಯೈವ ತದ್ವಂದಿತಮುನಿಜಯತೀರ್ಥಂ ನೌಮಿ ॥
– ಶ್ರೀವೇದನಿಧಿತೀರ್ಥರು (ಗುರುಮಾಹಾತ್ಮ್ಯ ಪ್ರಕಾಶಕಗಾನಮ್)*

ವಾದಿನಾಽಂತಃ ಕ ಇತ್ಯುಕ್ತೇ ಕ ಏವ ತ್ವಮಿತೀರಿತೇ ।
ಅಹಂ ಕಃ ಪುನರಿತ್ಯುಕ್ತೇ ಜಯೀತ್ಯೂದೇ ಹಿ ಸೋಽವತು ॥ ಗುರುಮಾಹಾತ್ಮ್ಯರತ್ನಾವಲಿ. ೨೮

* ಇದು ಛಲಾರೀ ಜಯತೀರ್ಥವಿಜಯ ವ್ಯಾಖ್ಯಾನದಲ್ಲಿ ಉದ್ಧೃತ (೫/೩.೪).

ನಿಜವಾದ ವಿದ್ವಾಂಸರಿಗೆ ಮಾತ್ರ. ವಿದ್ಯಾರಣ್ಯರು ನಿಜಕ್ಕೂ ಶ್ರೇಷ್ಠವಿದ್ವಾಂಸರೇ ಆಗಿದ್ದುದರಿಂದ ಶ್ರೀಜಯತೀರ್ಥರ ವ್ಯಾಖ್ಯಾನಕೌಶಲವನ್ನು ಗುರುತಿಸಲು ಸಾಧ್ಯವಾಯಿತು; ಬಳಿಕ ನ್ಯಾಯ-ರತ್ನಾಕರಗಳೆನ್ನಿಸಿದ ನ್ಯಾಯಸುಧಾದಿಗ್ರಂಥಗಳನ್ನು ಅವಲೋಕಿಸಿದಾಗ ಅವರಿಗೆ ಉಂಟಾದ ಅಚ್ಚರಿ ಅವರ ಮೇಲಿನ ಗೌರವಭಾವಕ್ಕೆ ಕಾರಣವಾಗಿ ಪರಿಪರಿಯಿಂದ ಅವರ ವಿದ್ವತ್ತನ್ನು ಹೊಗಳಿ, ಸಂತೋಷಪಟ್ಟರು. ಅಲ್ಲಿಗೂ ತೃಪ್ತರಾಗದೆ, ತಮಗೆ ವಿಜಯನಗರದ ಅರಸರು ನೀಡಿದ್ದ ಆನೆಯ ಮೇಲೆ ಶ್ರೀಜಯತೀರ್ಥರನ್ನು ಅವರ ಗ್ರಂಥಗಳ ಸಮೇತ ಕುಳ್ಳಿರಿಸಿ, ವೇದಘೋಷ, ವಾದ್ಯವೃಂದಗಳೊಂದಿಗೆ ದೊಡ್ಡ ಪ್ರಮಾಣದಲ್ಲಿ ಮೆರವಣಿಗೆಯನ್ನು ಏರ್ಪಡಿಸಿ, ತಮ್ಮ ಗೌರವವನ್ನು ವ್ಯಕ್ತಪಡಿಸಿದರು[೧].

ಶ್ರೀಜಯತೀರ್ಥವಿಜಯಗಳಲ್ಲಿ ದಾಖಲಾಗಿರುವ ವಿವರಗಳಿಂದ ಶ್ರೀಜಯತೀರ್ಥರ ವಿದ್ವತ್ತಿನೊಂದಿಗೆ ಆ ಕಾಲದಲ್ಲಿ ವಿದ್ವಾಂಸರಲ್ಲಿದ್ದ ಸಹೃದಯತೆ, ವಿದ್ಯಾಪಕ್ಷಪಾತ ಮೊದಲಾದ ಗುಣಗಳು ವ್ಯಕ್ತವಾಗುತ್ತದೆ. ಇದರೊಂದಿಗೆ ಮತ್ತೊಮ್ಮೆ ಅವರಿಬ್ಬರಿಗೂ ಶೃಗಾಲಮಠ ಎಂಬಲ್ಲಿ ವಾಕ್ಯಾರ್ಥ ನಡೆದು, ಆಗಲೂ ಶ್ರೀಜಯತೀರ್ಥರು ಜಯಶೀಲರಾದ ವಿವರವೂ ದಾಖಲಾಗಿದೆ. ಅದರ ಸ್ಮಾರಕವಾಗಿ ಜಯಸ್ತಂಭವೊಂದು ಸಹ ಆ ಸ್ಥಳದಲ್ಲಿ ಪ್ರತಿಷ್ಠಿತವಾಯಿತೆಂಬ ಉಲ್ಲೇಖ ಅಣುಜಯತೀರ್ಥವಿಜಯದಲ್ಲಿದೆ.

## ಜ್ಞಾನವಾರಿಧಿಯಿಂದ ತಟಾಕದ ರಕ್ಷಣೆ

ಶ್ರೀಜಯತೀರ್ಥರು ಗ್ರಂಥರಚನೆಯಲ್ಲಿ ತೊಡಗಿದ್ದಾಗ ಮತ್ತೊಂದು ಘಟನೆ ನಡೆಯಿತು. ಆ ಊರಿನ ಗೌಡ ಜನೋಪಯೋಗಕ್ಕಾಗಿ ಒಂದು ಕೆರೆಯನ್ನು ನಿರ್ಮಿಸುವ ಯೋಜನೆ-ಯೊಂದನ್ನು ಹಮ್ಮಿಕೊಂಡ. ಅದರಂತೆ ಬಹುದಿನಗಳ ಕಾಲ ಆ ಕಾರ್ಯ ನಡೆದು ಬೃಹದಾಕಾರದ ಕೆರೆ ಸಿದ್ಧವೂ ಆಯಿತು. ಮುಂದೊಮ್ಮೆ ಮಳೆ ಸುರಿದು ಕೆರೆಯು ನೀರಿನಿಂದ ತುಂಬಿಯೂ ಹೋಯಿತು. ಗೌಡನಿಗೂ, ಊರಜನರಿಗೂ ಸಂಭ್ರಮವೋ ಸಂಭ್ರಮ. ಆದರೆ ಆ ಸಂಭ್ರಮ ಬಹುಕಾಲ ಉಳಿಯಲು ಸಾಧ್ಯವಾಗಲಿಲ್ಲ. ಕೆಲವೇ ದಿನಗಳಲ್ಲಿ ಕೆರೆಯ ನೀರೆಲ್ಲ ಬತ್ತಿ ಬರಿದಾಗಿಹೋಯಿತು. ನಿರಾಶನಾದ ಗೌಡ ಮತ್ತೊಂದು ಮಳೆಗಾಲಕ್ಕಾಗಿ ಕಾದು ಕುಳಿತ.

---

೧. ಶ್ರುತ್ವಾ ತಾಂ ಲಜ್ಜಿತೋಽಮುಂ ಪ್ರವಚನಚತುರಂ ಸ್ತೋತ್ರದಂಡಪ್ರಣಾಮ್ಯೈಃ
ನಾಗೇಂದ್ರಂ ಚಾಧಿರೂಢಂ ದ್ವಿಜಗಣಸಹಿತೋಽಚಾರಯದ್ವಾದ್ಯಸಂಘೈಃ ॥
– ವ್ಯಾಸತೀರ್ಥಕೃತಅಣುಜಯತೀರ್ಥವಿಜಯ (೨೨)

ತತೋ ನ್ಯಾಯಸುಧಾದೀಂಶ್ಚ ನ್ಯಾಯರತ್ನಾಕರಾನಸೌ ।
ಜಯಾರ್ಯದರ್ಶಿತಾನ್ ಪಶ್ಯನ್ ಚಿತ್ರಮಾರ ಪರಂ ಕಿಲ ॥
ವಾರಣೇಂದ್ರಂ ಸಮಾರುಹ್ಯ ಗತವಾನ್ ಸರ್ವದಿಗ್ಜಯೀ ।
ಸ ವಾದಿತ್ರಾದಿಸಂಪತ್ತ್ಯಾಸತ್ರಾ ಭೂಮಂಡಲೇ ಚರನ್ ॥
ತಂ ಸಮಾರೋಪ್ಯ ನಾಗೇಂದ್ರಂ ಜಯತೀರ್ಥಂ ಜಯಾಸ್ಪದಮ್ ।
ಚಾರಯಾಮಾಸ ತತ್ರಾಸೌ ಸವಾದಿತ್ರಮಹಂ ಕಿಲ ॥ – ಛ.ಜ.ವಿ. (೫/೪೫-೪೭)

ಆಗಲೂ ಮತ್ತೊಮ್ಮೆ ಕೆರೆ ಪೂರ್ಣ ತುಂಬಿತು. ಆದರೆ ಆ ಸಂಭ್ರಮವೂ ಉಳಿಯದಾಯಿತು. ಕೆರೆ ಪುನಃ ಬರಿದಾಗಿ ಗೌಡನಿಗೂ ಜನರಿಗೂ ಚಿಂತೆ ಆವರಿಸಿತು. ಗೌಡನಂತೂ ಅದರ ಪರಿಹಾರಕ್ಕೆ ಭಗವಂತನನ್ನು ಶರಣು ಹೊಕ್ಕ. ಆಗ ಸ್ವಪ್ನಸೂಚನೆ ದೊರಕಿತು. 'ಎಲವೋ, ನೀನು ಇಲ್ಲಿಯ ಸಮೀಪದಲ್ಲಿರುವ ಮಹಾತ್ಮರ ಅನುಗ್ರಹವನ್ನು ಸಂಪಾದಿಸಿಲ್ಲ. ಅದಕ್ಕಾಗಿಯೇ ದೈವಪ್ರಕೋಪದಿಂದಾಗಿ ನಿನ್ನ ಕೆರೆ ಬರಿದಾಗುತ್ತಿದೆ. ಈಗಲೂ ಕಾಲ ಮಿಂಚಿಲ್ಲ. ಅವರ ಬಳಿ ತೆರಳಿ ಪ್ರಾರ್ಥಿಸಿಕೋ. ಅವರ ಹಸ್ತದಿಂದ ಮುಷ್ಟಿಮಾತ್ರಮಣ್ಣನ್ನು ತಂದು ಈ ಕೆರೆಯಲ್ಲಿ ಹಾಕು. ಆಗ ಇದರಲ್ಲಿ ನಿಲ್ಲುವ ನೀರು ಬರಿದಾಗದು'.

ಗೌಡನಿಗೆ ಅಚ್ಚರಿಯೊಂದಿಗೆ ವಿಷಾದವೂ ಆಯಿತು. ಹಾಗೊಬ್ಬ ಮಹಾನುಭಾವರು ಇರುವುದನ್ನು ಅವನು ಕೇಳಿದ್ದರೂ, ಅವರ ಅನುಗ್ರಹವನ್ನು ಸಂಪಾದಿಸುವ ಪ್ರಯತ್ನ ಪಟ್ಟಿರಲಿಲ್ಲ. ಅಂತಹ ಪ್ರಮಾದಕ್ಕಾಗಿ ಪಶ್ಚಾತ್ತಾಪಪಟ್ಟ ಅವನು, ಆ ಮಹಾತ್ಮರು ಶ್ರೀಜಯತೀರ್ಥರೇ ಎಂಬುದನ್ನು ತಿಳಿದು, ಅವರ ಬಳಿ ಧಾವಿಸಿ, ತನ್ನ ಪ್ರಯತ್ನವನ್ನು ವಿವರಿಸಿ, ಅವರ ಅನುಗ್ರಹಪಡೆಯಲು ತನಗಾದ ಸೂಚನೆಯನ್ನೂ ಅರಿಕೆ ಮಾಡಿಕೊಂಡನು. ಕರುಣಾಳುಗಳಾದ ಶ್ರೀಜಯತೀರ್ಥರು ಅವನ ಕೋರಿಕೆಯನ್ನು ಮನ್ನಿಸಿ, ಒಂದು ಮುಷ್ಟಿಮಾತ್ರ ಮಣ್ಣನ್ನು ಅಭಿಮಂತ್ರಿಸಿ, ಅವನ ಕೈಗೆ ನೀಡಿದರು. ಅದನ್ನು ಅವನು ಭಕ್ತಿಭಾವದಿಂದ ಸ್ವೀಕರಿಸಿ, ಸ್ವಪ್ನಸೂಚನೆಯಂತೆ ಕೆರೆಯಲ್ಲಿ ಹಾಕಿದನು. ಅನಂತರ ಬಂದ ಮಳೆಗೆ ಕೆರೆ ತುಂಬಿತು. ಆದರೆ ಅದರಲ್ಲಿಯ ನೀರು ಹಿಂದಿನಂತೆ ಸೋರದೆ, ಬಹುಕಾಲ ನಿಲ್ಲತೊಡಗಿತು. ತನ್ನ ಉದ್ದೇಶ ಸಾರ್ಥಕವಾದದ್ದಕ್ಕೆ ಅವನಿಗಾದ ಸಂಭ್ರಮ, ಊರಿನ ಜನತೆಗಾದ ಸಂತೃಪ್ತಿ ವರ್ಣನಾತೀತ-ವಾಯಿತು. ಇಂದಿಗೂ ಶ್ರೀಜಯತೀರ್ಥರ ಅನುಗ್ರಹದಿಂದ ಜಲಭರಿತವಾದ ಆ ಕೆರೆ ಯರಗೋಳದಲ್ಲಿದ್ದು, ಅದರಿಂದೂ ನೂರಾರು ಎಕರೆ ಜಮೀನು ಸಾಗುವಳಿಯಾಗುತ್ತಿದೆ ಎಂಬುದನ್ನು ಪ್ರತ್ಯಕ್ಷ ಕಾಣಬಹುದು. ಶ್ರೀಜಯತೀರ್ಥರ ಈ ಮಹಿಮೆ ಅವರ ತಪಃಶಕ್ತಿಗೂ, ದೀನದಲಿತರನ್ನು ಉದ್ಧರಿಸುವ ಅಪಾರಕಾರುಣ್ಯಕ್ಕೂ ಶ್ರೇಷ್ಠನಿದರ್ಶನ[೧]. ಜ್ಞಾನದಂತೆ ಅನ್ನವನ್ನೂ

---

೧. ತಟಾಕಂ ಬಂಧಯಾಮಾಸ ಕಶ್ಚಿಚ್ಛೂದ್ರಾಧಿಪಸ್ತದಾ ।
ಸೇತುಂ ಸ ಬಂಧಯಾಮಾಸ ತಟಾಕೇ ಸಾಗರೋಪಮಮ್ ॥
ವಿಧಾತುಮದ್ರಿಮಧ್ಯೇಽಲಂ ಮಹಾರ್ಥವ್ಯಯತಃ ಕಿಲ ।
ಮಹಾಪ್ರಯತ್ನಬದ್ಧೋಽಪಿ ಭಿನ್ನ ಏವಾಭವತ್ ತದಾ ॥
ಮುಹುರ್ಮುಹುಸ್ತದಾ ಸೇತುರ್ವಿಷಣ್ಣಃ ಕಿಲ ಸೋಽಭವತ್ ।
ದರ್ಯಾಮತ್ರ ಸಮಾಸೀನಂ ಪ್ರಸಾದ್ಯ ಯತಿಪಂ ಯದಾ ॥
ಮುಷ್ಟಿಮಾತ್ರಮೃದಂ ಸೇತೌ ತೇನ ಸ್ಥಾಪಯಸೇ ತದಾ ।
ಅಯಂ ಸೇತುರಭಿನ್ನಸ್ಸ್ಯಾದ್ದೃಢೋ ಗಾಢಮಿತಿ ಸ್ಫುಟಮ್ ॥
ದೃಷ್ಟ್ವಾ ಸ್ವಪ್ನಂ ಸ ಶೂದ್ರಾರ್ಯೋ ವಿಸ್ಮಿತೋಽಲಮಭೂತ್ ಕಿಲ ।
ತಪಸ್ವೀಂದ್ರಂ ಸಮಾಸಾದ್ಯ ಜಯತೀರ್ಥೇಂದ್ರಮೇಷಕಃ ॥

ಕರುಣಿಸುವ ಅವರ ಈ ಮಹಿಮೆ ಅವರ ಗ್ರಂಥಗಳ ಅಧ್ಯಯನದಿಂದ ಅನ್ನಕ್ಕೆ ಕೊರತೆ ಇಲ್ಲ ಎಂಬ ತತ್ತ್ವಕ್ಕೂ ಸೂಚಕವಾಗಿದೆ. ಶ್ರೀಮಧ್ವಸಿದ್ಧಾಂತವನ್ನು ಹೀಗೆ ಅಕ್ಷರಶಃ ಪಾಲಿಸಿದ ಮಹಾತ್ಮರೆಲ್ಲರೂ ಸಮಾಜದ ಎಲ್ಲ ವರ್ಗದ ಜನರಿಗೂ ಹಿತವೆಸಗಿದ ಕರುಣಾಳುಗಳಾಗಿ ಮಾನ್ಯರಾಗಿರುವುದು ಇತಿಹಾಸದಿಂದ ತಿಳಿದುಬರುತ್ತದೆ.

ಇಂದ್ರನು ಮಳೆಯ ದೇವತೆ ಎನ್ನುವುದು ಶಾಸ್ತ್ರಪ್ರಸಿದ್ಧ. ಆದರಿಂದಲೇ ಅವರ ಬಗ್ಗೆ ತೋರಿಸಿದ ಔದಾಸೀನ್ಯ ಕೆರೆ ಸೋರಲು ಕಾರಣವಾದರೆ, ಅವರಿಂದ ದೊರೆತ ಅನುಗ್ರಹದಿಂದಾಗಿ ಕೆರೆ ಭದ್ರವಾಗಲೂ ಕಾರಣವಾಯಿತು ಎಂಬ ಸೂಚನೆಯನ್ನೂ ಈ ಪ್ರಸಂಗದಲ್ಲಿ ಕಾಣಬಹುದು. ಕೆರೆಯಲ್ಲಿ ಎಷ್ಟು ನೀರಿದ್ದರೂ, ಶ್ರೀಜಯತೀರ್ಥರ ಅನುಗ್ರಹದ ಹೊರತು ಆ ನೀರು ಸ್ಥಿರವಾಗಲಿಲ್ಲ ಎಂಬ ಈ ನಿದರ್ಶನದಲ್ಲಿ ಎಷ್ಟೇ ಶಾಸ್ತ್ರಜ್ಞಾನವನ್ನು ಮನಸ್ಸಿನಲ್ಲಿ ತುಂಬಿಕೊಂಡರೂ ಶ್ರೀಜಯತೀರ್ಥರ ಗ್ರಂಥಗಳನ್ನು ಅಧ್ಯಯನ ಮಾಡಿ, ಅವರ ಅನುಗ್ರಹ ಸಂಪಾದಿಸದ ಹೊರತು ಮೂಲಗ್ರಂಥಗಳ ಭಾವ ಮನವರಿಕೆಯಾಗಲಾರದು ಎಂಬ ಶ್ರೇಷ್ಠತತ್ತ್ವವೂ ಇದರಿಂದ ನಿರೂಪಿತವಾಗಿದೆ ಎಂದೂ ಭಾವಿಸಬಹುದು.

## ಪಾಠಪ್ರವಚನಗಳು

ಗ್ರಂಥರಚನೆಯೊಂದಿಗೆ ಶ್ರೀಜಯತೀರ್ಥರ ಪಾಠಪ್ರವಚನವೂ ನಿರಂತರವಾಗಿ ಸಾಗಿತ್ತು. ಪ್ರಾಯಃ ಅಂದಿನ ಪಾಠಪ್ರವಚನವೇ ಗ್ರಂಥರೂಪದಲ್ಲಿ ಸಿದ್ಧವಾಗುತ್ತಿದ್ದಿತು ಎಂದೂ ಭಾವಿಸ-ಬಹುದು. ಅಂತಹ ಪಾಠಪ್ರವಚನರೂಪದ ಜ್ಞಾನಯಜ್ಞದ ಫಲಶ್ರುತಿಯಾಗಿ ಅನೇಕರು ಜ್ಞಾನಿ-ವರೇಣ್ಯರೆನ್ನಿಸಿ ಮಾನ್ಯರಾದರು.

### ೧. ಶ್ರೀವಿದ್ಯಾಧಿರಾಜತೀರ್ಥರು :

ಸಮಗ್ರಶಾಸ್ತ್ರಾಧ್ಯಯನವನ್ನು ಶ್ರೀಜಯತೀರ್ಥರ ಪದತಲದಲ್ಲಿ ಕುಳಿತು ಅಭ್ಯಸಿಸಿದ ಮಹಾಭಾಗ್ಯಶಾಲಿಗಳಲ್ಲೊಬ್ಬರು ಶ್ರೀವಿದ್ಯಾಧಿರಾಜತೀರ್ಥರು. ಇವರು ಅವರ ವಿದ್ಯಾಶಿಷ್ಯರು ಮಾತ್ರವಲ್ಲದೆ, ಮುಂದೆ ಅವರಿಂದಲೇ ಸಂನ್ಯಾಸ ಪಡೆದು ಅವರ ಉತ್ತರಾಧಿಕಾರಿಗಳಾಗಿ ಸರ್ವಜ್ಞಪೀಠದಲ್ಲಿ ವಿರಾಜಮಾನರಾದರು. ಅವರು ಆಶ್ರಮಪಡೆದ ಸ್ಥಳವೂ ಸಹ ತ್ರಿವೇಣೀ-

---

ಪ್ರಸಾದ್ಯ ಕಾರಯಾಮಾಸ ತಥಾ ತೇನ ದಯಾಲುನಾ ।
ತತಃ ಪ್ರಭೃತಿ ತತ್ಸೇತುರ್ನ ಪುಸ್ಫೋಟ ಪುನಃ ಕಿಲ ॥
ತತ್ತಪೋನಿಧಿಮಾಹಾತ್ಮ್ಯಾದೇತಂ ನಿರ್ಭರಾದ್ಭುತಮ್ ।
ತತ್ಸೇತುನಾ ವಿಶಾಲೇನ ಶಾಂತೇನಾರ್ಣವಸನ್ನಿಭಮ್ ॥
ತಟಾಕಂ ಶೋಭತೇಽದ್ಯಾಪಿ ಚಲದೂರ್ಮಿಸಮಾಕುಲಮ್ ॥

– ಛಲಾರೀಜಯತೀರ್ಥವಿಜಯ (೫/೫೦-೫೭)

ಶ್ರೀಜಯೀಂದ್ರೋದಯ ಮತ್ತು ಶ್ರೀಜಯತೀರ್ಥವಿಜಯಾಬ್ಧಿಗಳಲ್ಲಿಯೂ ಈ ತಟಾಕಸಂರಕ್ಷಣೆಯ ವಿವರ ಬಂದಿದೆ.

ಸಂಗಮದಂತಹ ಪವಿತ್ರಕ್ಷೇತ್ರ. ಜ್ಞಾನಭಕ್ತಿವೈರಾಗ್ಯಗಳ ತ್ರಿವೇಣೀಸಂಗಮದಂತಿದ್ದ ಅವರಿಗೆ ತ್ರಿವೇಣೀಸಂಗಮದಲ್ಲಿಯೇ ಆಶ್ರಮವಾಗಿದ್ದು ಅತ್ಯಂತ ಸಮುಚಿತವಾದ ಸಿದ್ಧಿಯಾಯಿತು. ಅವರು ಪೀಠವಹಿಸಿಕೊಂಡ ಮೇಲೆ ಒಬ್ಬ ಪ್ರಿಯಶಿಷ್ಯರಿಗೆ ಶ್ರೀರಾಜೇಂದ್ರತೀರ್ಥರು ಎಂದು ನಾಮಕರಣ ಮಾಡಿ, ಸಂನ್ಯಾಸದೀಕ್ಷೆಯನ್ನಿತ್ತರು. ಅವರು ಬಂಗಾಲಪ್ರಾಂತದಲ್ಲಿ ತತ್ತ್ವಪ್ರಸಾರ-ಕಾರ್ಯದಲ್ಲಿ ಬಹುಕಾಲ ಅಲ್ಲಿಯೇ ನೆಲೆಸಿದ್ದರಿಂದ ಶ್ರೀವಿದ್ಯಾಧಿರಾಜರು ತಮ್ಮ ಅಂತ್ಯಕಾಲದಲ್ಲಿ ಮತ್ತೊಬ್ಬ ಶಿಷ್ಯರಿಗೆ ಸಂನ್ಯಾಸದೀಕ್ಷೆ ಇತ್ತು ಶ್ರೀಕವೀಂದ್ರತೀರ್ಥರು ಎಂದು ನಾಮಕರಣ ಮಾಡಿ ಪೀಠ ಒಪ್ಪಿಸಿದರು. ಶ್ರೀರಾಜೇಂದ್ರತೀರ್ಥರ ಪರಂಪರೆಯು ಪ್ರತ್ಯೇಕವಾಗಿ ಬೆಳೆದು, ಮುಂದೆ ಮುನಿತ್ರಯರಲ್ಲಿ ಒಬ್ಬರೆನ್ನಿಸಿದ ಶ್ರೀವ್ಯಾಸತೀರ್ಥರಂತಹ ವಿದ್ವನ್ಮಣಿಗಳು ಆ ಪರಂಪರೆಯಲ್ಲಿ ಬಂದಿದ್ದರಿಂದಾಗಿ ಅದು ಮುಂದೆ ಶ್ರೀವ್ಯಾಸರಾಜಮಠವೆಂದೇ ಪ್ರಸಿದ್ಧವಾಯಿತು. ಶಾಸ್ತ್ರ-ರಾಜವೆನ್ನಿಸಿದ ಮಹಾಭಾರತದ ಸಾರಸರ್ವಸ್ವವೆನ್ನಿಸಿದ ಶ್ರೀವಿಷ್ಣುಸಹಸ್ರನಾಮ ಹಾಗೂ ಭಗವದ್ಗೀತೆ ಎಂಬ ಎರಡಕ್ಕೂ [೧]ಅಪೂರ್ವವ್ಯಾಖ್ಯಾನಗಳನ್ನು ರಚಿಸಿರುವುದು ಶ್ರೀವಿದ್ಯಾಧಿರಾಜರ ಅಪೂರ್ವಸಾಧನೆ; ಇವರೊಮ್ಮೆ ಭೀಮರಥೀತೀರದಲ್ಲಿದ್ದಾಗ ಭಾಗೀರಥಿಯು ಪ್ರತ್ಯಕ್ಷವಾಗಿ ಕಾಣಿಸಿಕೊಂಡು ಪೂಜಿತಳಾದಳು ಎಂದು ಪ್ರತೀತಿ[೨].

## ೨. ಶ್ರೀವ್ಯಾಸತೀರ್ಥರು :

ಇವರು ಶ್ರೀಜಯತೀರ್ಥರ ಮತ್ತೊಬ್ಬ ವಿದ್ಯಾಶಿಷ್ಯರು ಹಾಗೂ ಆಶ್ರಮಶಿಷ್ಯರು. ಶ್ರೀಜಯತೀರ್ಥರ ವಿಶೇಷ ಪ್ರೀತಿಪಾತ್ರರಾಗಿದ್ದರೆಂಬುದು ಇವರ ಹಿರಿಮೆ. ಪೀಠವೇರದೆ, ಬಿಡಿಸಂನ್ಯಾಸಿಗಳಾಗಿಯೇ ತತ್ತ್ವಪ್ರಸಾರಮಾಡಿದ ಅಪೂರ್ವವ್ಯಕ್ತಿಗಳು. ದ್ವೈತವೇದಾಂತದ ರಸಋಷಿಗಳಲ್ಲಿ ಒಬ್ಬರೆನ್ನಿಸಿದ ಅಗ್ರಮಾನ್ಯಗ್ರಂಥಕಾರರೆಂಬುದು ಇವರ ಹಿರಿಮೆಯ ಇನ್ನೊಂದು ಮುಖ. ಈ ಮುಂಚೆ ಹೇಳಿದಂತೆ ದಶೋಪನಿಷತ್ತುಗಳಲ್ಲಿ ಶ್ರೀಜಯತೀರ್ಥರು ವ್ಯಾಖ್ಯಾನಿಸಿದ ಈಶಾವಾಸ್ಯ ಹಾಗೂ ಷಟ್ಪ್ರಶ್ನಗಳ ಭಾಷ್ಯಗಳನ್ನು ಬಿಟ್ಟು ಇತರ ಎಂಟು ಉಪನಿಷದ್ಭಾಷ್ಯಗಳಿಗೂ ಟೀಕೆ ರಚಿಸಿದ 'ಉಪನಿಷದ್ಭಾಷ್ಯಟೀಕಾಕಾರರು' ಎಂಬುದು ಇವರ ಪ್ರಶಸ್ತಿ. ಅನಂತರದ ಉಪನಿಷದ್ಭಾಷ್ಯವ್ಯಾಖ್ಯಾನಕಾರರು ತಮ್ಮ ಕೃತಿಗಳಲ್ಲಿ ಇವರನ್ನು ಬಹಳ ಗೌರವದಿಂದ ವಂದಿಸಿ-ರುವುದು ಇವರ ವ್ಯಾಖ್ಯಾನದ ಮಹತ್ತ್ವಕ್ಕೆ ದ್ಯೋತಕ. ಇವುಗಳೊಂದಿಗೆ ಮಹಾಭಾರತ-ತಾತ್ಪರ್ಯನಿರ್ಣಯಕ್ಕೆ ಭಾರತಭಾವಪಂಚಿಕಾ ಎಂಬ ಟಿಪ್ಪಣಿಯನ್ನೂ ಇವರು ರಚಿಸಿರುವರು. ಶ್ರೀಮದಾಚಾರ್ಯರ ತಂತ್ರಸಾರಸಂಗ್ರಹಕ್ಕೂ ಇವರು ವ್ಯಾಖ್ಯಾನ ರಚಿಸಿರುವುದಾಗಿ ಪ್ರತೀತಿ. ಪ್ರಮಾಣಮಾಲಿಕಾ ಎಂಬ ಮತ್ತೊಂದು ಕೃತಿಯನ್ನೂ ಇವರು ರಚಿಸಿರುವುದಾಗಿ ಪ್ರಾಚೀನ-ಗ್ರಂಥಗಳಲ್ಲಿ ಉಲ್ಲೇಖವುಂಟು. ಜಯತೀರ್ಥವಿಜಯ ಮತ್ತು ಅಣುಜಯತೀರ್ಥವಿಜಯಗಳನ್ನು ರಚಿಸಿ, ಆ ಮೂಲಕವಾಗಿ ತಮ್ಮ ಗುರುಗಳ ಮಹಿಮೆಯನ್ನು ಪ್ರಚುರಪಡಿಸಿದ ಹಿರಿಮೆಯೂ

೧. ಇವರ ಗೀತಾವಿವೃತಿಯನ್ನು ನಮ್ಮ ಪ್ರತಿಷ್ಠಾನವು ಪ್ರಕಾಶನಪಡಿಸಿದೆ (೨೦೦೬).

೨. ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು (ಸರ್ಗ ೭/ ಶ್ಲೋ. ೬-೧೧)

ಇವರದೇ ಆಗಿದೆ. ಇವರು ವೃಂದಾವನವು ಮಳಖೇಡದಲ್ಲಿ ಶ್ರೀಜಯತೀರ್ಥರ ವೃಂದಾವನದ ಸಮೀಪದಲ್ಲೇ ಇರುವುದು ಸಹ ಅವರ ವಿಶೇಷಾನುಗ್ರಹಪಾತ್ರರಾಗಿದ್ದುದಕ್ಕೆ ಪೋಷಕವಾಗಿದೆ.

**೩. ಶ್ರೀವಿಷ್ಣುತೀರ್ಥರು :**

ಆರಣ್ಯಕಾಚಾರ್ಯರೆಂದೇ ಖ್ಯಾತರಾಗಿ ಶ್ರೀಮದ್ಭಾಗವತಸಾರೋದ್ಧಾರ, ಗೀತಾಸಾರೋದ್ಧಾರ, ನ್ಯಾಯಸುಧಾಟಿಪ್ಪಣೀ, ಷೋಡಶೀ, ಚತುರ್ದಶೀ ಹಾಗೂ ಅಧ್ಯಾತ್ಮಾಮೃತರಸರಂಜನೀ ಎಂಬ ಪ್ರಮೇಯಭರಿತವಾದ ವಿಶಿಷ್ಟಕೃತಿಗಳನ್ನು ರಚಿಸಿ, ವಿಖ್ಯಾತರಾದ ಮಹಾಮಹಿಮರು ಶ್ರೀವಿಷ್ಣುತೀರ್ಥರು (೧೭೫೬-೧೮೦೬). ಅವರು ಮೂಲತಃ ಶ್ರೀಜಯತೀರ್ಥರ ಸಾಕ್ಷಾಚ್ಛಿಷ್ಯರಲ್ಲೊಬ್ಬರಾಗಿದ್ದು, ಅವರ ಆದೇಶದಂತೆ ಅವತರಿಸಿ ಬಂದು ಹೀಗೆ ತತ್ತ್ವಪ್ರಸಾರ ಮಾಡಿದರು ಎಂಬುದಾಗಿ ಪಂಚರತ್ನ ಎಂದು ಪ್ರಸಿದ್ಧವಾಗಿರುವ ಅವರ ಜೀವನಚರಿತ್ರೆಯಲ್ಲಿ ಉಲ್ಲೇಖಿತವಾಗಿದೆ[೧].

**೪. ಶ್ರೀಶ್ರೀನಿವಾಸಾಚಾರ್ಯರು :**

ಇವರು ಶ್ರೀಜಯತೀರ್ಥರ ಗೃಹಸ್ಥಶಿಷ್ಯರಲ್ಲಿ ಪ್ರಧಾನರು. ಇವರ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬಂದಿಲ್ಲ. ಇವರು 'ವಂದೇ ವಿಷ್ಣುಂ' ಎಂಬ ತಾರತಮ್ಯಸ್ತೋತ್ರಕ್ಕೆ ರಚಿಸಿರುವ ವ್ಯಾಖ್ಯಾನವೊಂದು ನನ್ನ ಸಂಗ್ರಹದಲ್ಲಿ ಉಪಲಬ್ಧವಿದೆ.

## ದ್ವಿತೀಯ ದಿಗ್ವಿಜಯ

ಗ್ರಂಥರಚನೆಯ ಮಹಾತಪಸ್ಸು ಪೂರೈಸುತ್ತಲೇ ಶ್ರೀಜಯತೀರ್ಥರು ಕೈಗೊಂಡ ಮಹತ್ಕಾರ್ಯ ತೀರ್ಥಸಂಚಾರ[೨]. ಯತಿಗಳ ತೀರ್ಥಸಂಚಾರಕ್ಕೆ ಶಾಸ್ತ್ರಗಳಲ್ಲಿ ವಿಶೇಷ ಮಹತ್ತ್ವವಿದೆ. ಸಂಚಾರ ಯತಿಗಳ ನಿತ್ಯವಿಧಿ. ಚಾತುರ್ಮಾಸ್ಯದ ಹೊರತು ಉಳಿದ ದಿನಗಳಲ್ಲಿ ಒಂದು ಗೋದೋಹನದ ಕಾಲದಷ್ಟು ಮಾತ್ರ ಒಂದು ಸ್ಥಳದಲ್ಲಿ ನೆಲೆಸಬೇಕೆಂಬ ವಿಶಿಷ್ಟವಿಧಿ ಶಾಸ್ತ್ರಗಳಲ್ಲಿ ವಿಹಿತವಾಗಿದೆ. ಪರಿವ್ರಾಜಕರು ಎಂಬ ಹೆಸರು ಈ ಅರ್ಥದಲ್ಲೂ ಅವರಿಗೆ ಸಾರ್ಥಕವಾಗಿದೆ. ವಿವಿಧ ಸ್ಥಳಗಳಲ್ಲಿನ ಭಕ್ತವರ್ಗಕ್ಕೆ ಪರತತ್ತ್ವವನ್ನು ಉಪದೇಶಿಸುವ ಅವರ ಜೀವನವ್ರತಕ್ಕೆ ಪೂರಕವಾಗಲಿ ಎಂಬುದೇ ಈ ನಿಯಮದ ಹಿನ್ನೆಲೆ. ಇಂತಹ [೩]ಸಂಚಾರದಿಂದಾಗಿ ಜನರಲ್ಲಿ ತತ್ತ್ವಜಾಗೃತಿಗೆ ಅವಕಾಶ ಲಭಿಸಿ,

---

೧. ಕೃತಾ ಸುಧಾಽಭೂದಕೃತೋಪಮಾ ಯತಸ್ತದಸ್ಮದಧ್ಯಾಪಿತಶಿಷ್ಯಶೇಖರಃ ।
ಸಂಪ್ರೇಷಣೀಯಃ ಸ ತದರ್ಥಮಿತ್ಥಂ ಪ್ರಾಜ್ಞಾಂ ತದಾಜ್ಞಾಂ ಪ್ರದದುಃ ಸುಧಾಕೃತಃ ॥
– ಪಂಚರತ್ನ(ಅಧ್ಯಾಯ ೧/ಶ್ಲೋ ೪೭)

೨. ಇತಿ ದಿಶಾಂ ವಿಜಯಂ ಸ ತದಾ ತದಾ ಕ್ಷಿತಿತಲೇ ವಿರಚಯ್ಯ ಗುರೂನ್ ಸ್ವಕಾನ್ ।
ಅಭಿಗತಃ ಸಮನಂದಯದಾರ್ಪಯನ್ ವಸು ಕುವಾದಿಜಯಂ ಜಯತೀರ್ಥರಾಟ್ ॥
–ಛಲಾರಿಜಯತೀರ್ಥವಿಜಯ (೬/೧೫)

೩.. 'ಅನುಗ್ರಹಾಯ್ಯೆವ ಚರಂತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ' – ಭಾಗವತ೩./೫/೩

ಅವರು ಸನ್ಮಾರ್ಗಪರಾಯಣರಾಗಲು ಸಾಧ್ಯವಾಗುವುದು. ಇಂತಹ ಸಂಚಾರ ಯಾವುದೇ ಕಾಲದಲ್ಲೂ ಅಷ್ಟು ಸುಲಭಸಾಧ್ಯವೇನಲ್ಲ. ಎಂತಹ ಸುಖಪ್ರಯಾಣದಲ್ಲೂ ಆಯಾಸದ ಹಿನ್ನೆಲೆ ತಪ್ಪಿದ್ದಲ್ಲ. ಆ ಕಾಲಕ್ಕಂತೂ ಸಂಚಾರವೇ ಒಂದು ದೊಡ್ಡ ತಪಸ್ಸು ಎನ್ನುವಂತಿತ್ತು. ಪ್ರಕ್ಷುಬ್ಧ ರಾಜಕೀಯ ವಾತಾವರಣ, ಪ್ರತಿಕೂಲ ಹವಾಮಾನ, ಕಳ್ಳಕಾಕರ ಹಾವಳಿ, ಕ್ರೂರಮೃಗಗಳ ಉಪಟಳ, ಹಳ್ಳಕೊಳ್ಳಗಳು ಹಾಗೂ ನದಿಗಳ ಅಡಚಣೆ ಇವುಗಳಿಂದಾಗಿ ಪ್ರಯಾಣ ದುಃಸಾಧ್ಯವೆನ್ನಿಸಿತ್ತು. ಪ್ರಯಾಣವೇ ಇಷ್ಟು ಕ್ಲಿಷ್ಟಕರವಾಗಿದ್ದಾಗ ತತ್ತ್ವಪ್ರಸಾರದ ಗುರಿಸಾಧನೆಯಂತೂ ಇನ್ನೂ ಕಠಿನವಾಗಿದ್ದಿತು. ಅದಕ್ಕೆ ಮೇಲಿನ ಕಾರಣಗಳೊಂದಿಗೆ ಇತರ ಮತಗಳ ಅನುಯಾಯಿಗಳಿಂದ ಒದಗುವ ಬಗೆಬಗೆಯ ಉಪಟಳಗಳೂ ಬೇರೆ ಬಗೆಯಲ್ಲಿ ಅಡ್ಡಿಯಾಗುತ್ತಿದ್ದವು. ಉಪದೇಶದೊಂದಿಗೆ ಶಿಷ್ಯಸಂಪತ್ತಿಯನ್ನೂ ಬಲಪಡಿಸಿಕೊಳ್ಳುವುದು ಇಂತಹ ಸಂಚಾರದ ಮತ್ತೊಂದು ಉದ್ದೇಶವಾಗಿತ್ತು.

ಹೀಗಾಗಿ ಅಂದಿನ ಕಾಲದ ಸಂಚಾರ ಸಾಮಾನ್ಯರಿಗೆ ದುಃಸಾಧ್ಯವೆನ್ನಿಸಿತ್ತು. ವಿಶೇಷ ತಪಃಸಿದ್ಧಿ ಇಲ್ಲದವರಿಗಂತೂ ಹೆಚ್ಚಿನ ಸಂಚಾರ ತೀರ ಅಸಾಧ್ಯವೆನ್ನಿಸಿತ್ತು.

ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಶ್ರೀಜಯತೀರ್ಥರ ಈ ನಿಟ್ಟಿನ ಸಾಧನೆಯೂ ಸಹ ಅಚ್ಚರಿ ಹುಟ್ಟಿಸುವಷ್ಟು ವ್ಯಾಪಕವಾಗಿದ್ದಿತು. ಜಯೀಂದ್ರೋದಯ ಕೃತಿಯಲ್ಲಿ ಇವರ ಸಂಚಾರದ ಬಗ್ಗೆ ಹೆಚ್ಚಿನ ವಿವರಗಳು ದಾಖಲಾಗಿವೆ. ಅದರಿಂದ ತಿಳಿಯುವಂತೆ ಉಡುಪಿ (೬/೧/೧೪), ವಿಮಾನಗಿರಿ, ಪಾಜಕ (೧೫-೧೭), ಸುಬ್ರಹ್ಮಣ್ಯ (೧೮-೨೦), ಶ್ರೀರಂಗ (೨೪-೪೦), ಕುಂಭಘೋಣ (೪೧), ರಾಮೇಶ್ವರ (೪೨), ತಿರುವನಂತಪುರ (೪೩-೪೪), ಕಾಶೀ (೪೬-೪೯), ಬದರೀ (೫೦-೫೨), ತಿರುಪತಿ (೫೫-೬೦) ಮತ್ತು ಶ್ರೀಮುಷ್ಣ (೬೧-೬೫) ಕ್ಷೇತ್ರಗಳನ್ನು ಇವರು ಸಂದರ್ಶಿಸಿದ್ದರು. ಇವರು ಪ್ರಯಾಗವನ್ನೂ ಸಂದರ್ಶಿಸಿದ್ದ ವಿವರ ಅಣುಜಯತೀರ್ಥವಿಜಯದಲ್ಲಿ ಬಂದಿದೆ (ಶ್ಲೋ.೩೨); ವಿಜಯನಗರ, ದೆಹಲಿ, ಅಹಮದಾಬಾದ್, ನಾಸಿಕ್, ಪಂಢರಪುರ ಮೊದಲಾದ ಇನ್ನೂ ಅನೇಕ ಮುಖ್ಯ ಕ್ಷೇತ್ರಗಳಿಗೂ ಅವರು ಹೋಗಿದ್ದುದಾಗಿ ಪ್ರತೀತಿಯುಂಟು. ಶ್ರೀರಂಗದಲ್ಲಿ ದೀರ್ಘಕಾಲ ನೆಲೆಸಿ, ಅಲ್ಲಿ ವಾದಿಜಯದೊಂದಿಗೆ ತತ್ತ್ವಪ್ರಸಾರವನ್ನೂ ಮಾಡಿದ ಉಲ್ಲೇಖ ಜಯೀಂದ್ರೋದಯದಲ್ಲಿದೆ[1]. ಇವರ ಈ ಸಾಧನೆಯಿಂದಾಗಿ ಮುಂದೆ ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀಸುಮತೀಂದ್ರತೀರ್ಥರು ಮೊದಲಾದ ಜ್ಞಾನಿವರೇಣ್ಯರು ಇದನ್ನು ತಮ್ಮ ತತ್ತ್ವಪ್ರಸಾರದ ಒಂದು ಪ್ರಮುಖಕೇಂದ್ರವನ್ನಾಗಿ ಮಾಡಿಕೊಳ್ಳಲು ಸಾಧ್ಯವಾಯಿತೆಂಬುದನ್ನು ಇಲ್ಲಿ ಊಹಿಸಬಹುದು.

ವಾದಿನಿಗ್ರಹ, ತಪ್ತಮುದ್ರಾಧಾರಣೆ ಮತ್ತು ತತ್ತ್ವೋಪದೇಶಗಳಿಂದ ಸಜ್ಜನರನ್ನು ಉದ್ಧರಿಸುವುದೇ ಅವರ ಸಂಚಾರದ ಮುಖ್ಯ ಗುರಿಯಾಗಿದ್ದವು :

೧. ಶ್ರೀರಂಗದಲ್ಲಿ ಒಂದು ತಿಂಗಳಕಾಲ ವಾಸಿಸಿದ್ದುದಾಗಿ ಜಯೀಂದ್ರೋದಯದಲ್ಲಿ ಉಲ್ಲೇಖ ಉಂಟು.

ವಹ್ನಿತಪ್ತಚಕ್ರಶಂಖಲಕ್ಷ್ಮ ಬಾಹುಮೂಲಯೋರ್ನಿಜಪಾದಭಕ್ತಿಸಂಭೃತಾತ್ಮನಾಂ ಸದಾ ।
ಮಂತ್ರರತ್ನಪೂರ್ವಸರ್ವಮಂತ್ರದಾನಮಾದರಾತ್ಸಂಯಮೀ ಸ ಚಾಕರೋಚ್ಚ ವೈಷ್ಣವತ್ವಸಿದ್ಧಯೇ ॥
ಸಂದಿತೀರ್ಥಾರ್ಯಭಾಷ್ಯಾರ್ಥಭಾವಂ ಪರಂ ಸರ್ವದಾ ಸಜ್ಜನೇಷ್ವಾದರಾದ್ದರ್ಶಯನ್ ।
ಸರ್ವಪಾಪಾನಿ ತೇಭ್ಯೋ ವಿನಿಷ್ಕಾಸಯನ್ ಶುದ್ಧಭಾವಾನ್ ಗುರುಸ್ತಾಂಶ್ಚಕಾರಾನಿಶಮ್ ॥

— ಜಯೀಂದ್ರೋದಯ (೬/೨೨-೨೦)

## ವಾದಿಜಯ

ವಾದಿಜಯ ತತ್ತ್ವಪ್ರಸಾರಕರಿಗೆ, ಅದರಲ್ಲೂ ಸಂನ್ಯಾಸಿಗಳಿಗೆ, ವಿಶೇಷವಾಗಿ ಪೀಠಾಧೀಶರಿಗೆ ಅತ್ಯಂತ ಆವಶ್ಯಕವಾದ ಕಾರ್ಯ. ಯಾವುದೇ ಸ್ಥಳವನ್ನು ಅದರಲ್ಲೂ ತೀರ್ಥಕ್ಷೇತ್ರವನ್ನು ಸಂದರ್ಶಿಸಿದಾಗ ಸಹಜವಾಗಿ ಅಲ್ಲಿಯ ವಿವಿಧಪಂಥಗಳ ದಾರ್ಶನಿಕರನ್ನು ವಾಕ್ಯಾರ್ಥದಲ್ಲಿ ಎದುರಿಸುವುದು ಅಂದಿನ ಸರ್ವಸಾಮಾನ್ಯ ರೂಢಿಯಾಗಿದ್ದಿತು. ಹೀಗಾಗಿ ವಾದಕೌಶಲವಿಲ್ಲದವರು ತೀರ್ಥಯಾತ್ರೆಯನ್ನು ಮಾಡುವುದು ಅಸಾಧ್ಯ ಎನ್ನುವಂತಾಗಿತ್ತು. ವಿಶೇಷಮನ್ನಣೆಗೆ ಪಾತ್ರರಾದ ವಿದ್ವಾಂಸರು ಹಾಗೂ ಪೀಠಾಧೀಶರು ಸಂಚಾರ ಕೈಗೊಂಡರಂತೂ, ಅವರನ್ನು ಎದುರಿಸಲು ವಿದ್ವನ್ಮಂಡಲಿಗಳೇ ಯೋಜನೆ ಹಾಕಿಕೊಂಡು ಸಿದ್ಧವಾಗಿರುತ್ತಿದ್ದವು. ವಿವಿಧಮತಗಳ ಅನುಯಾಯಿಗಳನ್ನು ನೇರವಾಗಿ ಎದುರಿಸಿ, ಪರಾಭವಗೊಳಿಸದ ಹೊರತು ತಮ್ಮ ಸಿದ್ಧಾಂತದ ಪ್ರಸಾರದ ಕಾರ್ಯ ಎಷ್ಟುಮಾತ್ರಕ್ಕೂ ಯಶಸ್ವಿಯಾಗುವುದು ಸಾಧ್ಯವಿರಲಿಲ್ಲ. ಇನ್ನು ಶಿಷ್ಯಸಂಪಾದನೆಯಂತೂ ಕನಸಿನ ಮಾತೇ ಎನ್ನಿಸುತ್ತಿತ್ತು. ಈ ನಿಟ್ಟಿನಲ್ಲಿ ವಾದಿಜಯ ಸಿದ್ಧಾಂತದ ಇತಿಹಾಸದಲ್ಲಿ ಮಹಾತಪಸ್ವಿಗಳ ಸಾಧನರಂಗದಲ್ಲಿ ಅತ್ಯಂತ ಪ್ರಧಾನವೆನ್ನಿಸುವ ಪಾತ್ರವನ್ನು ನಿರ್ವಹಿಸುತ್ತಿತ್ತು. ಆಗಿನ ಕಾಲದ ವಾದಿಗಳು ಅನೇಕ ದರ್ಶನಗಳಲ್ಲಿ ತಲಸ್ಪರ್ಶಿ-ಪಾಂಡಿತ್ಯವನ್ನು ಹೊಂದಿ ಉತ್ತಮವಾಕ್ಪಟುಗಳೂ ಆಗಿ ಪ್ರಬಲ ಸವಾಲನ್ನೆಸೆಯಲು ಸಮರ್ಥ-ರಾಗಿದ್ದರು. ಕೆಲವರಂತು ಗ್ರಂಥಾಪಹಾರ, ವಾಮಾಚಾರ ಮೊದಲಾದವುಗಳ ಮೂಲಕವಾದರೂ ಜಯ ಸಂಪಾದಿಸುವ ಹವಣಿಕೆಯಲ್ಲಿ ಇದ್ದವರು.

ಶ್ರೀಜಯತೀರ್ಥರು ತಮ್ಮ ಅಪ್ರತಿಮವಾದಕೌಶಲದಿಂದಾಗಿಯೂ ಇತಿಹಾಸಪುಟಗಳಲ್ಲಿ ಮಹತ್ತ್ವದ ಸ್ಥಾನವನ್ನು ಗಳಿಸಿರುವರು. ಇವರ ಗ್ರಂಥಗಳ ಅಧ್ಯಯನವೇ ಜಯಕರ ಎಂದ ಮೇಲೆ, ಸ್ವತಃ ಅವರೇ ವಾದಕ್ಕಿಳಿದು, ವಾದಿಗಳನ್ನು ಜಯಿಸಿದ್ದು ಅತ್ಯಂತ ಸಮುಚಿತವಾದ ವಿಷಯವೇ ಆಗಿದೆ[೧].

ವಾದೀಂದ್ರ ಎಂಬ ತುಂಬಾ ಪ್ರಸಿದ್ಧನಾಗಿದ್ದ ಒಬ್ಬ ಅದ್ವೈತವಾದಿಯನ್ನು ಇವರು ವಾದದಲ್ಲಿ ಪರಾಭವಗೊಳಿಸಿದ ಸಂಗತಿ ಅಣುಜಯತೀರ್ಥವಿಜಯದಲ್ಲಿ ಬಂದಿದೆ. ಅದರಲ್ಲಿ ಆ ವಾದದ ಕೆಲವು ವಿವರಗಳೂ ಸಹ ದಾಖಲಾಗಿರುವುದು ಗಮನಾರ್ಹ[೨].

---

೧. ವಿಜಿತ್ಯ ಸಮಯಾನ್ ಬಹೂನ್ ಯತಿವರಃ ಪರತ್ವಂ ಹರೇಃ ।
ಅನೇಕ ನೃಪಸಂಸದಿಶ್ರುತಿಶತೈರಸೌ ಸಾಧಯನ್ ॥ -ಜಯೀಂದ್ರೋದಯ (೬/೪೦)

೨. ಈ ವಾದೀಂದ್ರನನ್ನು ಪರಾಭವಗೊಳಿಸಿದ ಪ್ರಸಂಗವು ಶ್ರೀಬಿದರಹಳ್ಳಿಶ್ರೀನಿವಾಸಕೃತ ಶ್ರೀಜಯಾರ್ಯ-ಸ್ತುತಿಯಲ್ಲೂ ಬಂದಿದೆ. ಈ ವಾದೀಂದ್ರನು ಯಾರು ಎಂಬ ಬಗ್ಗೆ ಹೆಚ್ಚು ವಿವರವು ತಿಳಿದುಬಂದಿಲ್ಲ.

ಈ ವಾದೀಂದ್ರನು ಪರಾಭವಗೊಂಡದ್ದಲ್ಲದೆ, ನಿಶಾಪಲಾಯನವನ್ನೇ ಮಾಡಿ, ಮತ್ತಷ್ಟು ಅಪಖ್ಯಾತಿಗೆ ಗುರಿಯಾದನು. ಅವನು ಬಹುಕಾಲದಿಂದ ಸಾಧಿಸಿದ್ದ ಖ್ಯಾತಿಯನ್ನೆಲ್ಲ ಶ್ರೀಜಯ-ತೀರ್ಥರು ಅವನನ್ನು ಹಾಗೆ ಸೋಲಿಸುವ ಮೂಲಕ ಅತ್ಯಲ್ಪಕಾಲದಲ್ಲೇ ಸಾಧಿಸಿ, ಲೋಕಮನ್ನಣೆಗೆ ಪಾತ್ರರಾದರು. ವಾದೀಂದ್ರನ [೧]ಪರಾಭವದ ಸಂಗತಿ ಹರಡುತ್ತಿದ್ದಂತೆಯೇ

---

ಕೆಲವರು ಊಹಿಸುವಂತೆ ಇವನು ಪುರುಷಾರ್ಥಪ್ರಬೋಧ ಎಂಬ ಗ್ರಂಥವನ್ನು ರಚಿಸಿದ ಬ್ರಹ್ಮಾನಂದಭಾರತಿ(೧೩೯೩)ಯ ಗುರು. ಆತನ ಗ್ರಂಥದಲ್ಲಿ ಈ ವಾದೀಂದ್ರನು ವಿದ್ಯಾಸಾಗರ ಎಂಬುದಾಗಿಯೂ ಉಲ್ಲೇಖಿತವಾಗಿದೆ. ವಿದ್ಯಾಸಾಗರ ವಾದೀಂದ್ರನ ಉಲ್ಲೇಖ ಇಮ್ಮಡಿ ಹರಿಹರನ ಕಾಲದ ಕಡೂರು ಜಿಲ್ಲೆಯ ಕೊಪ್ಪದ ೩೪ನೆಯ ಶಾಸನದಲ್ಲಿ ಬಂದಿದೆ(ಶಾಸನದ ಕಾಲ ೧೩೮೬). ಈ ವಾದೀಂದ್ರನ ಕಾಲ ಶ್ರೀಜಯತೀರ್ಥರ ಕಾಲಕ್ಕೆ ಸರಿಹೊಂದುತ್ತದೆ ಎಂಬುದು ಗಮನಾರ್ಹ.

೧. ಇತ್ಯಾದ್ಯೈಶ್ಚಿತ್ರಚರ್ಯೈರ್ಯತಿವರಮಸಹನ್ ಸರ್ವದಿಕ್ಷು ಪ್ರಸಿದ್ಧೋ
ವಾದೀಂದ್ರೋ ವಾದಿಶೂರೋ ವಿಧೃತಜಯಪಟಃ ಶೀಘ್ರಮಾಯಾದ್ವಿಜೇತುಮ್ ।
ಸಂಪ್ರಾಪ್ತಂ ತಂ ಸ್ವಶಿಷ್ಯೈರ್ಬಹುಭಿರಮಲಧೀರೈಕ್ಯವಾದೋ ನ ಸಿದ್ಧೋ
ಮಾನಾಭಾವಾದಿತಿ ದ್ರಾಗವದದಮುಮಸೌ ಮಾನ್ಯಲೋಕೈಶ್ಚ ಮಾನ್ಯಃ ॥
ಇತ್ಯಾಕ್ಷಿಪ್ತೋಽಭಿಮಾನೀ ಹ್ಯವದದಮುಮಸೌ ತತ್ತ್ವತೋ ನೈವ ಭಿನ್ನಾ
ಹ್ಯಾತ್ಮತ್ವಾದಾತ್ಮನೋಽನ್ಯೇ ನಿಖಿಲವಿಧುರವಚ್ಚೇತಿ ಮಾನಂ ತ್ವಭೇದೇ ।
ಇತ್ಥಂ ಚೋಕ್ತೋಽಮುನಾಽಸೌ ಹ್ಯವದದತಿಬಲಂ ದೂಷಣಂ ಬಾಧಸಂಜ್ಞಂ
ಸಿದ್ಧತ್ವಾತ್ ಸದ್ಭಿದಾಯಾಃ ಶ್ರುತಿಶತವಚನೈರ್ದ್ವಾಸುಪರ್ಣಾದಿರೂಪೈಃ ॥
ಐಕ್ಯಂ ಬ್ರಹ್ಮಸ್ಥವಾಕ್ಯೈರ್ಬಹುಭಿರಪಿ ದೃಢಂ ತತ್ತ್ವಮಸ್ಯಾದಿರೂಪೈ-
ರಿತ್ಥಂ ನಾಶಂಕನೀಯಂ ಸದೃಶಗುಣವಶಾತ್ ಸಿಂಹಶಬ್ದೋ ಯಥಾಽಣೌ ।
ಏವಂ ನಾಂಗೀಕರೋಷಿ ಶ್ರುತಿತತಿರಭವಚ್ಚಾಪ್ರಮಾಣಂ ವಿರೋಧಾ-
ದನ್ಯೋನ್ಯಂ ನೈವ ಭೇದಶ್ರುತಿರಪಿ ಬಹುಧಾ ಸಾವಕಾಶಾ ಸ್ಫುಟತ್ವಾತ್ ॥
ಯದ್ಯೇವಂ ಬಾಧಿತಾರ್ಥಂ ಶ್ರುತಿತತಿರವದಚ್ಛ್ರೌತವಾಕ್ಯಾವಿಶೇಷಾತ್
ಸತ್ಯಂ ಜ್ಞಾನೇತಿ ವಾಕ್ಯಂ ಪ್ರಕೃತಿಪರಪರಂ ಬಾಧಿತಾರ್ಥಂ ವದೇತ ।
ಅಸ್ತ್ವಿತ್ಯೇವಂ ವದೇಥಾಃ ಪ್ರಕೃತಿಪರಪರಂ ಪ್ರಾಪ್ಯ ಮುಕ್ತಿರ್ನಿರಾರ್ಥ್ಯಾ
ನ ಸ್ಯಾದ್ವೈಕಲ್ಯದೋಷಾಚ್ಛ್ರುತಿತತಿವಿಹಿತಸ್ಯಾರ್ಥಬಾಧೋ ನ ಚಾಸ್ತಿ ॥
ಗೀತಾಯಾಂ ದರ್ಶಿತತ್ವಾತ್ ಸಕಲನಿಗಮವಾಙ್ನಿರ್ಣಯಾರ್ಥಂ ಪ್ರವೃತ್ತೇ
ಸೂತ್ರೇ ಸಂದರ್ಶಿತತ್ವಾಚ್ಛ್ರುತಿತತಿವಿಹಿತೋ ಬಾಧಿತೋ ನೈವ ಭೇದಃ ।
ಇತ್ಥಂ ತದ್ಬಾಧಿತೈಕ್ಯಂ ಪ್ರಕಥಯಸಿ ತದಾ ದೂಷಣೈರಪ್ಯಸಂಖ್ಯೈ-
ರ್ದುಷ್ಟೋಽಸೀತ್ಥಂ ನಿರುದ್ಧೋ ವಿಗತಮುಖರಸೋಽವಾಙ್ಮುಖೋಽಗಾನ್ನಿಶಾಯಾಂ ॥
ಕೀರ್ತಿಂ ತತ್ಸಾಧಿತಾಂ ತಾಂ ಬಹುವಿಜಯಭವಾಂ ಕಾಲತೋ ನಾಲ್ಪತೋಽಸೌ
ಪ್ರಾಪ್ತಃ ಕಾಲಾಲ್ಪತೋಽಯಂ ಸಕಲದಿಶಿಗತಾಂ ಕೀರ್ತಿಮಾಪಾನವದ್ಯಾಮ್ ।
ಕೀರ್ತಿಂ ತಾಂ ವಿದ್ವದಾಢ್ಯಾಃ ಪರಿಹೃತವಿಜಯಂ ವಾದಿಘೂಪಂ ನಿಶಮ್ಯ
ಕ್ಷುಬ್ಧಾಃ ಸಂತ್ರಸ್ತಗಾತ್ರಾ ವಿಸೃಜಿತಶಿಬಿಕಾ ನೈವ ಚೇಲುಃ ಸ್ವದೇಶಾತ್ ॥
– ಅಣುಜಯತೀರ್ಥವಿಜಯಃ (೨೩-೨೮)

ಇತರ ವಾದಿಗಳೆಲ್ಲ ಭೀತರಾಗಿ ತಮ್ಮ ಶಿಬಿಕಾದಿ(ಮೇನೆ)ವೈಭವಗಳನ್ನು ತೊರೆದು ಇದ್ದಲ್ಲಿಯೇ ಉಳಿದುಬಿಟ್ಟರು. ತಮ್ಮ ಸ್ವಸ್ಥಳವನ್ನು ಬಿಡುವ ಧೈರ್ಯ ಅವರಿಗೆ ಉಂಟಾಗಲೇ ಇಲ್ಲ.

ವಿದ್ಯಾರಣ್ಯರನ್ನು ಜಯಿಸಿದ ವಿವರ ಜಯೀಂದ್ರೋದಯ ಹಾಗೂ ಶ್ರೀಗುರ್ಜಾಲಾ-ಚಾರ್ಯರ [೧]ಜಯತೀರ್ಥಾಷ್ಟಕದಲ್ಲಿ ಬಂದಿದೆ.

ಅವರು ಮಳಖೇಡನಿವಾಸಿಯೇ ಆಗಿದ್ದ ಭೈರವಸೋಮಯಾಜೀ ಎಂಬ ವಾದಿಯೊಬ್ಬನನ್ನು ಜಯಿಸಿದ ಪ್ರತೀತಿಯೂ ಉಂಟು.

ಶ್ರೀರಂಗದಲ್ಲಿ ಒಂದು ಪ್ರಬಲ ಶಾಕ್ತೇಯ ತಂಡವನ್ನು ಇವರು ಜಯಿಸಿದ ವಿಶಿಷ್ಟಪ್ರಸಂಗ ಜಯೀಂದ್ರೋದಯದಲ್ಲಿದೆ(೬/೩೬-೪೦) :

**ಶಾಕ್ತೇಯಾಃ ಶಮಧನಮೇತ್ಯ ಜೇತುಕಾಮಾ ಮೈರೇಯಂ ಪಪುರಧಿಕಂ ಸಪುತ್ರಭಾರ್ಯಾಃ।**
**ತಾಂ ಶಕ್ತಿಂ ವಿಧಿವದಪೂಜಯನ್ನಿಶಾಯಾಂ ವ್ಯತ್ಯಾಸಂ ರತಿಷು ನಿಜಾಂಗನಾಸು ಚಕ್ರುಃ॥**

**ಸಂತುಷ್ಟಾ ಸಮಜನಿ ಪೂಜನೇನ ತೇನ ಸಾ ಶಕ್ತಿರ್ವರಮಖಿಲಂ ನಿಜಾರ್ಚಕಾನಾಮ್।**
**ಪ್ರಾತಸ್ತಂ ಯತಿವರಮಾಶು ಜೇಷ್ಯಥೇತಿ ಪ್ರಾದಾತ್ ತೇಽಭವದಿತಿ ಮೇನಿರೇ ಸ್ವಕಾರ್ಯಮ್॥**

**ಪ್ರಾತಃ ಸಮಾಗತ್ಯ ಯತೀಂದ್ರಮೇತೇ ಶಕ್ತೇರ್ಜಗತ್ಕಾರಣತಾಮವೋಚನ್।**
**ಬ್ರಹ್ಮೇಶವಿಷ್ಣುಪ್ರಮುಖಾಃ ಸುರೇಶಾ ಜಾತಾ ಯತಃ ಸಾ ಜಗದೀಶ್ವರೀತಿ॥**

**ನಿಶಮ್ಯ ತದ್ಭಾಷಿತಮಾತ್ಮಧೀರಯಂ ನಿರಾಕರೋತ್ ತಜ್ಜಯತೀರ್ಥಸಂಯಮೀ।**
**ನ ಚಾಸ್ತಿ ತತ್ಕೇವಲಮತ್ರ ಯೋಷಿತಸ್ತ್ವನಧಿಷ್ಠಿತಾಯಾಃ ಪುರುಷೇಣ ಚೇತಿ॥**

ಇಲ್ಲಿ ಬಂದಿರುವ ವಿವರಗಳು ತುಂಬ ಕುತೂಹಲಕರವಾಗಿರುವುದು ಗಮನಾರ್ಹ. ಶ್ರೀಜಯತೀರ್ಥರನ್ನು ನೇರವಾಗಿ ವಾದದಲ್ಲಿ ಜಯಿಸಲು ಸರ್ವಥಾ ಅಸಾಧ್ಯವೆಂದು ಭಾವಿಸಿದ ಆ ಶಾಕ್ತೇಯರು ವಾಮಮಾರ್ಗದಿಂದಲಾದರೂ ಅವರನ್ನು ಜಯಿಸುವ ಯೋಜನೆಯನ್ನು ಹಾಕಿಕೊಂಡರಂತೆ. ಅದರಂತೆ ಮದ್ಯಪಾನ, ವ್ಯತ್ಯಸ್ತರತಿ ಮೊದಲಾದ ಕುಮಾರ್ಗಗಳನ್ನು

---

ವಾದೀಂದ್ರೋಽನ್ಯಸ್ತದಾನೀಂ ಧೃತವಿಜಯಪಟಸ್ತ್ವೇಕವಾದೀ ಸಮಾಗಾತ್
ತಂ ದೃಷ್ಟ್ವಾ ಶ್ರೀಜಯಾರ್ಯಾಃ ಶ್ರುತಿಶತವಚನೈರಾಕ್ಷಿಪನ್ ಭೇದವಾಕ್ಯೈ-
ಸ್ತತ್ಕಾಲೇಽಸೌ ಕ್ಷಪಾಯಾಂ ಪರಿಹೃತಶಿಬಿಕೋಽವಾಙ್ಮುಖೋಽಗಾತ್ ಸ್ವದೇಶಮ್।
ತಚ್ಛ್ರುತ್ವಾ ವಾದಿನೋಽನ್ಯೇ ತ್ವತಿಭಯಸಹಿತಾ ನೈವ ಚೇಲುಃ ಸ್ವರಾಷ್ಟ್ರಾತ್ ......॥
— ಶ್ರೀಜಯಾರ್ಯಸ್ತುತಿಃ (ಶ್ಲೋ. ೧೧,೧೨)

೧. ವಿದ್ಯಾರಣ್ಯರನ್ನು ಜಯಿಸಿದ್ದರ ಕುರುಹಾಗಿ ಸೃಗಾಲಮಠ(ಕೊಲ್ಲಾಪುರ?)ದಲ್ಲಿ 'ಜಯಸ್ತಂಭ'ವೊಂದನ್ನು ಸ್ಥಾಪಿಸಿದ್ದಂತೆ ಸಹ ಈ ಅಷ್ಟಕದಿಂದ ತಿಳಿಯುತ್ತದೆ :

'ವಿದ್ಯಾರಣ್ಯಜಯಂ ಸೃಗಾಲಮಠಗಃ ಸ್ತಂಭೋ ಯದೀಯಃ ಸ್ಫುಟಂ। ವಕ್ತ್ಯದ್ಯಾಪಿ..... — (ಶ್ಲೋ ೮)

ಅನುಸರಿಸಿ, ಕ್ಷುದ್ರಶಕ್ತಿಯನ್ನು ಆರಾಧಿಸಿ, ಆ ಶಕ್ತಿಯಿಂದ ಶ್ರೀಜಯತೀರ್ಥರನ್ನು ಗೆಲ್ಲುವ ವರವನ್ನೂ ಪಡೆದುಕೊಂಡರಂತೆ. ಮಾರನೆಯ ದಿನ ವಾದದಲ್ಲಿ ಶಕ್ತಿಯೇ ಜಗತ್ಕಾರಣಳು, ವಿಷ್ಣುವಲ್ಲ, ಬ್ರಹ್ಮ, ರುದ್ರ, ವಿಷ್ಣು ಮೊದಲಾದವರೆಲ್ಲ ಆ ಶಕ್ತಿಯ ಸಂತಾನ ಎಂಬ ವಾದವನ್ನು ಮಂಡಿಸಿದರಂತೆ. ಆದರೆ ಶ್ರೀಜಯತೀರ್ಥರು ತಮ್ಮ ತಪಃಶಕ್ತಿಯಿಂದ ಆ ಕ್ಷುದ್ರಶಕ್ತಿ ನೀಡಿದ ವರವನ್ನು ವ್ಯರ್ಥವಾಗಿಸಿದ್ದಲ್ಲದೆ, ಬ್ರಹ್ಮಸೂತ್ರದ 'ಉತ್ಪತ್ತ್ಯಸಂಭವಾಧಿಕರಣ' ಹಾಗೂ ಅದರ ಮೇಲಿನ ಭಾಷ್ಯಾನುವ್ಯಾಖ್ಯಾನಗಳಲ್ಲಿ ನಿರೂಪಿತವಾದ ಪ್ರಬಲಯುಕ್ತಿಗಳಿಂದ ಅವರ ಶಕ್ತಿಕಾರಣತ್ವವಾದವನ್ನು ಖಂಡಿಸಿ, ವೇದಾಂತದ ವಿಜಯದುಂದುಭಿಯನ್ನು ಮೊಳಗಿಸಿ, ಮಾನ್ಯರಾದರು.

ಶ್ರೀಜಯತೀರ್ಥರು ಅಹಮದಾಬಾದಿಗೆ ದಿಗ್ವಿಜಯ ಮಾಡಿದ ಪ್ರಸಂಗದಲ್ಲಿ ಅಲ್ಲಿಯ ಪಂಡಿತರ ಪ್ರಬಲತಂಡವೊಂದು ವಾದಕ್ಕೆ ಬಂದಿತಂತೆ; ಅವರನ್ನೆಲ್ಲ ಸೋಲಿಸಿದುದಲ್ಲದೆ ಅಲ್ಲಿಯ ಅವರೆಲ್ಲರ ಮುಖಂಡನಾದ ಕಾಮದೇವನೆಂಬ ಬೌದ್ಧವಿಶ್ವವಿದ್ಯಾಲಯದ ಕುಲಪತಿಯನ್ನೂ ಸಹ ಇವರು ಜಯಿಸಿದರಂತೆ; ಇವರ ವಿದ್ವತ್ತಿಗೆ ಆಶ್ಚರ್ಯಪಟ್ಟ ಕಾಮದೇವನು ತಾನು ಕಾರಣಾಂತರದಿಂದ ಟಿಬೆಟ್‌ಗೆ ಹೋಗಬೇಕಾದ ಅನಿವಾರ್ಯ ಪ್ರಸಂಗ ಒದಗಿದಾಗ ಶ್ರೀಜಯತೀರ್ಥರನ್ನೇ ಆ ವಿದ್ಯಾಲಯದ ಕುಲಪತಿ ಸ್ಥಾನವನ್ನಲಂಕರಿಸಲು ಪ್ರಾರ್ಥಿಸಿ ಗೌರವಿಸಿದನೆಂದು ಸಹ ಪ್ರಸಿದ್ಧಿಯುಂಟು[೧]. ಯರಗೋಳದ ಗುಹೆಯಲ್ಲಿ ವಿದ್ಯಾರಣ್ಯರನ್ನು ನಿರುತ್ತರರನ್ನಾಗಿಸಿ, ದಿಗ್ಭ್ರಾಂತರನ್ನಾಗಿಸಿದ ವಿವರ ಈಗಾಗಲೇ ಬಂದಿದೆ.

ಶ್ರೀಜಯತೀರ್ಥರ ವಾದಕೌಶಲದ ಮುಂದೆ ತಾರ್ಕಿಕಮತ ಮಂಕಾಯಿತು; ಪ್ರಾಭಾಕರ-ಪ್ರಕ್ರಿಯೆ ಶೋಭೆ ಕಳೆದುಕೊಂಡಿತು; ವೈಭಾಷಿಕಾದಿಗಳು ದಿಕ್ಕೆಟ್ಟು ಓಡಿದರು; ಅದ್ವೈತಿಗಳು

---

೧. ಶ್ರೀಮನ್ಮಧ್ವಮುನೀಂದ್ರಚಿತ್ತಜಲರುದ್ಧಾಮಸ್ಫುರಚ್ಛ್ರೀರಮಾ-
ರಾಮಪ್ರೇಮಸಮೃದ್ಧವೀಕ್ಷಣಲಹರ್ಯಾ ಮಜ್ಜಮಾನಃ ಸದಾ ।
ಧೀಮತ್ಸಂತತಿಮುತ್ಸವಾಮೃತನಿಧಾವಾಮಜ್ಜಯನ್ ಸಂತತಂ
ಮೌನೀಂದ್ರೋಽದ್ಯ ವಿರಾಜತೇ ಹೃತಿತರಾಂ ಶ್ರೀಮಜ್ಜಯಾರ್ಯಾಭಿಧಃ ॥
ಮೀಮಾಂಸಾದ್ವಯಪಾರಗೋ ಗುರುರಸೌ ಯಃ ಕಾಶ್ಯಪೀಯೇ ನಯೇ
ಸಾಂಖ್ಯೇ ಚಾಪ್ರತಿಮಲ್ಲನೋ ನಯನಿಧಿಃ ತ್ರ್ಯಕ್ಷ್ಯೋಽಕ್ಷಪಾದೋಕ್ತಿದೃಕ್ ।
ಯಶ್ಚಾರ್ವಾಕವಿಶಾಲಮಾನದಮನೋ ದುರ್ವಾರಬೌದ್ಧಾಂಬುಧೇಃ
ಪಾನಾನಂದಿತಕುಂಭಸಂಭವಮುನಿರ್ದಿಗ್ವಾಸಸಾಮಂತಕಃ ॥
ಯಸ್ಯಾತ್ಯದ್ಭುತವಾಹವಾಹನಮಹಾಶಾಸ್ತ್ರಪ್ರಯೋಗಾದಿಷು
ಪ್ರಾಮಾಣ್ಯಂ ಪ್ರಕಥಿತಂ ಪೃಥುಮತಿಶ್ರೀಕಾಮದೇವೇನ ಚ ॥

- Q. in New Indian Antiquary Vol 1, No. 7, Oct. 1938 by Dr.B.N.K.Sharma.

– ಇವುಗಳ ಬಗ್ಗೆ ಇನ್ನು ಹೆಚ್ಚಿನ ಸಂಶೋಧನೆ ಅವಶ್ಯವಿದೆ.

ಸಾಚಿಕೆಯಿಂದ ಬಾಗಿದರು; ಭಾಸ್ಕರಮತ ಕ್ಷೋಭೆಗೊಂಡಿತು; ಎಂಬುದಾಗಿ ಅತ್ಯಂತ ಪರಿಣಾಮಕಾರಿಯಾಗಿ ಶ್ರೀಜಯತೀರ್ಥಸ್ತೋತ್ರದಲ್ಲಿ ಇವರ ವಾದವೈಖರಿ ಸ್ತುತಿಸಲ್ಪಟ್ಟಿದೆ:

ಆಭಾಸತ್ವಮಿಯಾಯ ತಾರ್ಕಿಕಮತಂ ಪ್ರಾಭಾಕರಪ್ರಕ್ರಿಯಾ
ಶೋಭಾಂ ನೈವ ಬಭಾರ ದೂರನಿಹಿತಾ ವೈಭಾಷಿಕಾದ್ಯುಕ್ತಯಃ ।
ಹ್ರೀಭಾರೇಣ ನತಾಶ್ಚ ಸಂಕರಮುಖಾಃ ಕ್ಷೋಭಾಕರೋ ಭಾಸ್ಕರಃ
ಶ್ರೀಭಾಷ್ಯಂ ಜಯಯೋಗಿನಿ ಪ್ರವದತಿ ಸ್ವಾಭಾವಿಕೋದ್ಯನ್ಮತೌ ॥

ಹೀಗೆ ಶ್ರೀಜಯತೀರ್ಥರ ಜೀವನ, ತಪಸ್ಸು, ಗ್ರಂಥರಚನೆ ಮೊದಲಾದ ಕಾರ್ಯಗಳಂತೆ ಅವರ ವಾದಿಜಯದ ಕಾರ್ಯವೂ ದಾಖಲೆಯ ಸಾಧನೆಯಾಯಿತು. ಹಾಗೆ ವಾದಿಗಳನ್ನು ಜಯಿಸಿ, ಸಂಪಾದಿಸಿದ ಜಯಪತ್ರಿಕೆಗಳ ರಾಶಿಯನ್ನು ಭಗವಂತನ ಚರಣಗಳಲ್ಲಿ ಸಮರ್ಪಿಸಿ, ಕೃತಕೃತ್ಯತೆ ಪಡೆದದ್ದನ್ನು ಶ್ರೀವ್ಯಾಸತೀರ್ಥರು ಹೃದಯಂಗಮವಾಗಿ ವರ್ಣಿಸಿರುವರು :

ಸರ್ವಾನ್ ಜಿತ್ವಾ ಕುವಾದೀನಮಲಚರಣಯೋಃ ಪತ್ರಜಾಲಂ ಜಯಸ್ಯ
ಶ್ರೀಕಾಂತಸ್ಯಾರ್ಪಯಿತ್ವಾ ಸ್ವಗುರುಪರಮವೃಂದಾವನಂ ವಂದಿತುಂ ದ್ರಾಕ್ ।
– ಶ್ರೀಅಣುಜಯತೀರ್ಥವಿಜಯ (ಶ್ಲೋ. ೩೨)

ತತ್ತದ್ರಾಷ್ಟ್ರೇಽಥ ಜಿತ್ವಾ ವಿಮತಿತತಿಮತಃ ಪತ್ರಪೂಗಾಂಶ್ಚ ಲಬ್ಧ್ವಾ
ತಾನ್ ವೈ ಶ್ರೀರಾಮಪಾದೇ ಸುಖಮುನಿಕೃತಧೀರಾರ್ಪಯತ್ ಕಾಶಿಕಾಯಾಮ್ ।
– ಶ್ರೀಜಯಾರ್ಯಸ್ತುತಿಃ (ಶ್ಲೋ. ೧೩)

## ಶ್ರೀಜಯತೀರ್ಥರ ಗ್ರಂಥಗಳು

ಶ್ರೀಜಯತೀರ್ಥರು ರಚಿಸಿದ ಗ್ರಂಥಗಳ ಸಂಖ್ಯೆ ಇಪ್ಪತ್ತೊಂದು[೧] ಎಂಬುದಾಗಿ ಶ್ರೀಜಯತೀರ್ಥಾಷ್ಟಕದಲ್ಲಿ ಬಂದಿದೆ. ಆ ಗ್ರಂಥಗಳ ಬಗ್ಗೆ ವಿವರಗಳನ್ನು ಕೊಡುವ ಪ್ರಾಚೀನ-ಶ್ಲೋಕವೊಂದು ಹೀಗಿದೆ:

ಗೀತಾಪ್ರಸ್ಥಾನಯುಗ್ಮಂ ತ್ರಿತಯಮಥ ಲಸತ್ಸೂತ್ರಸಂಸ್ಥಾನನಾಮ್ನಾ-
ಮೀಶಪ್ರಶ್ನೀಯಭಾಷ್ಯೇ ಪ್ರಕರಣದಶಕಂ ವ್ಯಾಕರೋದೃಕ್ಸುಭಾಷ್ಯಮ್ ।
ದೇವಾರ್ಚಾಸುಪ್ರಮಾಣಪ್ರವಿತತಪದವೀದ್ವಂದ್ವಕಂ ಚಾಕರೋದ್ಯೋ-
ವಾದಾವಲ್ಯಾ ನಿಬಂಧಂ ಜಯಮುನಿರನಿಶಂ ತಂ ಪ್ರಪದ್ಯೇಽರ್ಥಸಿದ್ಧ್ಯೈ ॥

ಇದರಂತೆ ಅವರು ರಚಿಸಿರುವ ಟೀಕಾಗ್ರಂಥಗಳು ಹದಿನೆಂಟು ಹಾಗೂ ಸ್ವತಂತ್ರಗ್ರಂಥಗಳು ಮೂರು. ಶ್ರೀಬಿದರಹಳ್ಳಿ ಶ್ರೀನಿವಾಸತೀರ್ಥರು ಸಂಗ್ರಹಿಸಿರುವ ಟೀಕಾಚಾರ್ಯರ ಆದ್ಯಂತ-ಶ್ಲೋಕಗಳಲ್ಲೂ ಈ ಇಪ್ಪತ್ತೊಂದು ಗ್ರಂಥಗಳು ಮಾತ್ರ ಸೇರಿವೆ ಎಂಬುದೂ ಗಮನಾರ್ಹ.

---

೧. ತ್ರ್ಯಷ್ಟಾದಶಗ್ರಂಥಕೃತ್ – ಜಯತೀರ್ಥಾಷ್ಟಕ (ಶ್ಲೋ.೬)

## ಟೀಕಾಗ್ರಂಥಗಳು

೧. ನ್ಯಾಯಸುಧಾ (ಅನುವ್ಯಾಖ್ಯಾನಟೀಕಾ) (೨೬೬೦೦)[೧]
೨. ತತ್ತ್ವಪ್ರಕಾಶಿಕಾ (ಸೂತ್ರಭಾಷ್ಯಟೀಕಾ) (೮೦೦೦)
೩. ನ್ಯಾಯವಿವರಣಟೀಕಾ
(ಮೊದಲ ಎರಡೂವರೆ ಪಾದಗಳಿಗೆ ಮಾತ್ರ) (೪೬೦)
೪. ಸಂಬಂಧದೀಪಿಕಾ (ಋಗ್ಭಾಷ್ಯಟೀಕಾ) (೩೫೦೦)
೫. ಪ್ರಮೇಯದೀಪಿಕಾ (ಗೀತಾಭಾಷ್ಯಟೀಕಾ) (೪೦೦೦)
೬. ನ್ಯಾಯದೀಪಿಕಾ (ಗೀತಾತಾತ್ಪರ್ಯನಿರ್ಣಯಟೀಕಾ) (೩೭೫೦)
೭. ಈಶಾವಾಸ್ಯೋಪನಿಷದ್ಭಾಷ್ಯಟೀಕಾ (೪೫೦)
೮. ಷಟ್ಪ್ರಶ್ನೋಪನಿಷದ್ಭಾಷ್ಯಟೀಕಾ (೫೦೦)
೯. ನ್ಯಾಯಕಲ್ಪಲತಾ (ಪ್ರಮಾಣಲಕ್ಷಣಟೀಕಾ) (೧೪೫೦)
೧೦. ಕಥಾಲಕ್ಷಣಟೀಕಾ (೩೫೪)
೧೧. ಮಾಯಾವಾದಖಂಡನಟೀಕಾ (೧೭೫)
೧೨. ಪ್ರಪಂಚಮಿಥ್ಯಾತ್ವಾನುಮಾನಖಂಡನಟೀಕಾ (೨೭೫)
೧೩. ಉಪಾಧಿಖಂಡನಟೀಕಾ (೩೬೦)
೧೪. ಕರ್ಮನಿರ್ಣಯಟೀಕಾ (೯೨೨)
೧೫. ತತ್ತ್ವಸಂಖ್ಯಾನಟೀಕಾ (೨೦೦)
೧೬. ತತ್ತ್ವವಿವೇಕಟೀಕಾ (೧೬೦)
೧೭. ತತ್ತ್ವೋದ್ಯೋತಟೀಕಾ (೧೬೦೦)
೧೮. ವಿಷ್ಣುತತ್ತ್ವವಿನಿರ್ಣಯಟೀಕಾ (೫೧೧೬)

## ಸ್ವತಂತ್ರ ಗ್ರಂಥಗಳು

೧. ಪ್ರಮಾಣ ಪದ್ಧತಿ (೭೨೦)
೨. ವಾದಾವಲೀ (೫೦೦)
೩. ಪದ್ಯಮಾಲಾ (೧೩೦)[೨]

---

೧. ಕಂಸದಲ್ಲಿನ ಸಂಖ್ಯೆಗಳು ಆಯಾ ಕೃತಿಗಳಲ್ಲಿನ ಗ್ರಂಥಸಂಖ್ಯೆಯನ್ನು ಸೂಚಿಸುತ್ತವೆ (ಮೂವತ್ತೆರಡು ಅಕ್ಷರಗಳಿಗೆ ಒಂದು ಗ್ರಂಥ ಎಂದು ಹೆಸರು).

೨. ಇವುಗಳೊಂದಿಗೆ ಶತಾಪರಾಧಸ್ತೋತ್ರ ಮತ್ತು ಅಧ್ಯಾತ್ಮಾಮೃತತರಂಗಿಣೀ ಎಂಬ ಎರಡು ಗ್ರಂಥಗಳನ್ನು ಶ್ರೀಜಯತೀರ್ಥಕೃತ ಎಂಬುದಾಗಿ ಸತ್ಕಥಾದಲ್ಲಿ ಉಲ್ಲೇಖಿಸಲಾಗಿದೆ. ಅನಂತರದ ಡಾ।। ಬಿ.ಎನ್.ಕೆ. ಶರ್ಮಾ ಮೊದಲಾದವರೆಲ್ಲ ಸತ್ಕಥಾದ ಉಲ್ಲೇಖವನ್ನೇ ಪುನರುಚ್ಚರಿಸುತ್ತಾ ಬಂದಿದ್ದಾರೆ. ಆದರೆ

ಶ್ರೀಜಯತೀರ್ಥರ ಕೃತಿಗಳಲ್ಲಿ 'ನ್ಯಾಯಸುಧೆ'ಯು ಬೃಹತ್ತು ಮತ್ತು ಮಹತ್ತು ಎರಡರಲ್ಲೂ 'ಮೇರುಕೃತಿ' ಎನ್ನಿಸಿದೆ. ಆಚಾರ್ಯ ಶ್ರೀಮಧ್ವರ 'ಅನುವ್ಯಾಖ್ಯಾನ'ವು ವೇದಾಂತವಾಙ್ಮಯದ ಶ್ಲೋಕರೂಪ ಗ್ರಂಥಗಳಲ್ಲಿ 'ಅರಸುಕೃತಿ' ಎನ್ನಿಸಿದ್ದರೆ, ಅದರ ಟೀಕೆಯಾಗಿರುವ ನ್ಯಾಯಸುಧೆಯು ಗದ್ಯಗ್ರಂಥಗಳಲ್ಲಿ 'ಅರಸುಕೃತಿ'ಯಾಗಿದೆ. **'ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ'** ಎಂಬ ಸುಪ್ರಸಿದ್ಧ ವೈಷ್ಣವಲೋಕೋಕ್ತಿಯು ಇದರ ಅಧ್ಯಯನದ ಮಹತ್ತ್ವಕ್ಕೆ ದ್ಯೋತಕವಾಗಿದೆ. ತತ್ತ್ವಶಾಸ್ತ್ರದ ಚಿಂತನ ಮಂಥನಗಳ ಆಳವಿಸ್ತಾರವೆಲ್ಲವುಗಳ ತವನಿಧಿ ಎನ್ನಿಸಿರುವ ಈ ಕೃತಿ ವಾಙ್ಮಯೇತಿಹಾಸದ ಪರಮಾಶ್ಚರ್ಯಗಳಲ್ಲೊಂದು. ಅವರ ತತ್ತ್ವ-ನಿರ್ಣಯಟೀಕೆಯು ಇದರ ಸಂಗ್ರಹರೂಪದಂತಿದ್ದು 'ಅಣುಸುಧಾ' ಎಂದೇ ಮಾನ್ಯವಾಗಿದೆ. ಸಮಗ್ರವೇದಾರ್ಥನಿರ್ಣಯಕ್ಕೆ ಋಗ್ಭಾಷ್ಯದ ಕೊಡುಗೆಯನ್ನು ವಿಶ್ಲೇಷಿಸುವ ಕೃತಿ 'ಸಂಬಂಧದೀಪಿಕಾ'. ಗೀತಾಭಾಷ್ಯ ಗೀತಾತಾತ್ಪರ್ಯಗಳು ಗೀತಾರ್ಥನಿರ್ಣಯದ ಮೇಲೆ ಚೆಲ್ಲುವ ಬೆಳಕಿಗೆ ಹಿಡಿದ ಕನ್ನಡಿಯೇ 'ಪ್ರಮೇಯದೀಪಿಕೆ' 'ನ್ಯಾಯದೀಪಿಕೆ'ಗಳು. ಸೂತ್ರಭಾಷ್ಯದ ಅರ್ಥವನ್ನು ಸಮಗ್ರವಾಗಿ ತಿಳಿಸುವ ಬ್ರಹ್ಮಸೂತ್ರಗಳ ಅಧ್ಯಯನಕ್ಕೆ ನೆರವಾಗುವ ಕೃತಿ – 'ತತ್ತ್ವಪ್ರಕಾಶಿಕಾ' ಸಮಗ್ರ ಸೂತ್ರಪ್ರಸ್ಥಾನದ ಟೀಕೆಗಳಲ್ಲಿ ಪ್ರಮುಖವೆನ್ನಿಸಿದೆ.

ಭಗವತ್ಪಾದರ ಕೃತಿಗಳ 'ವಾಮನ ರೂಪ'ದ 'ತ್ರಿವಿಕ್ರಮ ಸ್ವರೂಪ'ವನ್ನು ಅವರ ದಶಪ್ರಕರಣ ಟೀಕೆಗಳು ತಿಳಿಸಿಕೊಡುತ್ತವೆ. ಉಪನಿಷದ್ಭಾಷ್ಯ ಟೀಕೆಗಳು ಉಪನಿಷತ್ತುಗಳ ಅಧ್ಯಯನಕ್ಕೆ ಭಾಷ್ಯದ ಉಪಕಾರವನ್ನು ಸಮರ್ಥವಾಗಿ ಬಿಂಬಿಸುತ್ತವೆ. ಪ್ರಮಾಣಶಾಸ್ತ್ರ(ತತ್ತ್ವಜ್ಞಾನಪದ್ಧತಿ)ದ ಬಗ್ಗೆ ಸಮಗ್ರ ಮಾಹಿತಿಯನ್ನೀಯುವ ಪ್ರಮಾಣಪದ್ಧತಿ, ಜಗತ್ಸತ್ಯತ್ವಾದಿ ಪ್ರಮೇಯಗಳನ್ನು ಸುಂದರವಾಗಿ ಮಂಡಿಸುವ 'ವಾದಾವಲೀ' ತಂತ್ರಸಾರೋಕ್ತಭಗವತ್ಪೂಜಾವಿಧಿಯನ್ನು ಸಂಗ್ರಹಿಸುವ 'ಪದ್ಯಮಾಲಾ' ಹೀಗೆ ಅವರ ಪ್ರತಿಯೊಂದು ಗ್ರಂಥವೂ ಅತ್ಯಂತ ಸಾರ್ಥಕವೂ, ಉತ್ಕೃಷ್ಟವೂ ಆದ ರಚನೆಗಳಾಗಿವೆ.

ಶ್ರೀಟೀಕಾಚಾರ್ಯರು ಶ್ರೀಮದಾಚಾರ್ಯರ ಹದಿನೆಂಟು ಗ್ರಂಥಗಳಿಗೆ ಮಾತ್ರ ಟೀಕೆಗಳನ್ನು ರಚಿಸಿದ್ದರೂ, ಅವುಗಳ ಅಧ್ಯಯನದಿಂದ ಶ್ರೀಮದಾಚಾರ್ಯರ ಇತರ ಗ್ರಂಥಗಳ ಭಾವಗ್ರಹಣಕ್ಕೂ ಸ್ಪಷ್ಟ ನಿರ್ದೇಶನ ದೊರೆಯುವುದರಿಂದ ಅವರಿಂದ ಶ್ರೀಮದಾಚಾರ್ಯರ ಸಮಸ್ತಗ್ರಂಥಗಳೂ [೧]ವ್ಯಾಖ್ಯಾತಪ್ರಾಯ ಎಂದು ಭಾವಿಸಬಹುದು. ನ್ಯಾಯಸುಧಾದಿ

ಇವುಗಳಲ್ಲಿ ಶತಾಪರಾಧಸ್ತೋತ್ರವು ಗರುಡಪುರಾಣದ್ದು; ಅಧ್ಯಾತ್ಮಾಮೃತತರಂಗಿಣಿ ಎಂಬ ಕೃತಿ ಇಲ್ಲವೇ ಇಲ್ಲ. ಅಡವೀಜಯತೀರ್ಥಾಚಾರ್ಯ(ಮಾದನೂರು ವಿಷ್ಣುತೀರ್ಥರು)ಕೃತವಾದ ಅಧ್ಯಾತ್ಮರಸ-ರಂಜನೀ ಎಂಬುದನ್ನೇ ತಪ್ಪಾಗಿ ಅಧ್ಯಾತ್ಮಾಮೃತತರಂಗಿಣೀ ಎಂಬುದಾಗಿ ಉಲ್ಲೇಖಿಸಿರುವುದು ಸ್ಪಷ್ಟ ಶ್ರೀಜಯತೀರ್ಥರ ಒಟ್ಟು ಕೃತಿಗಳ ಸಂಖ್ಯೆ ಇಪ್ಪತ್ತೊಂದು (ತ್ರ್ಯಷ್ಟಾದಶಗ್ರಂಥಕೃತ್ – ಜಯತೀರ್ಥಾಷ್ಟಕ (ಶ್ಲೋ.೬))ಎಂಬುದಾಗಿ ಸ್ಪಷ್ಟ ಆಧಾರವಿರುವುದನ್ನು ಈಗಾಗಲೇ ಉಲ್ಲೇಖಿಸಲಾಗಿದೆ.

೧. ಸಪ್ತತ್ರಿಂಶತಿಮೂಲಸಂಘವಿವೃತಿಂ ಚಕ್ರೇ..... – ಅಡವೀಕೃಷ್ಣಾಚಾರ್ಯರು (ನ್ಯಾಯಸುಧಾಟಿಪ್ಪಣೀ)

ಗ್ರಂಥಗಳಲ್ಲಿ ಬರುವ ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯಾದಿಗಳ ಉಲ್ಲೇಖ ಇದನ್ನು ಸ್ಪಷ್ಟಪಡಿಸುತ್ತವೆ. ಅಲ್ಲದೆ ಶ್ರೀವ್ಯಾಸತೀರ್ಥಕೃತ ಅವಶಿಷ್ಟ ಅಷ್ಟೋಪನಿಷದ್ಭಾಷ್ಯಟೀಕೆಗಳು ಇವರ ಸಂಮತಿ, ಅನುಗ್ರಹಗಳಿಂದಲೇ ರಚಿತವಾದ್ದರಿಂದ ಅವೂ ಇವರ ಕೃತಿಗಳಂತೆಯೇ ಮಾನ್ಯವಾಗಿವೆ. ಅನಂತರದ ಉಪನಿಷದ್ಭಾಷ್ಯವ್ಯಾಖ್ಯಾನಗಳು ಇವರ ಗ್ರಂಥಗಳಿಗೆ ತೋರಿರುವ ಆದರವೇ ಇದಕ್ಕೆ ಸಾಕ್ಷಿ. ಹೀಗೆ 'ವ್ಯಾಖ್ಯಾಸ್ಯತ್ಯೇಷ ಗೋರಾಟ್' (ಅ.ಜ.ವಿ. ಶ್ಲೋ.೩) ಎಂಬ ಗುರುಮಧ್ವರ ಮಾತು ಈ ಅರ್ಥದಲ್ಲಿ ಪೂರ್ಣಸತ್ಯವೇ ಆಗಿದೆ.

## ಪದ್ಯಮಾಲಾ ಕೃತಿಯ ವೈಶಿಷ್ಟ್ಯ

ಶ್ರೀಜಯತೀರ್ಥರ ಉಳಿದೆಲ್ಲ ಕೃತಿಗಳೂ ಗದ್ಯದಲ್ಲಿದ್ದು ಈ 'ಪದ್ಯಮಾಲಾ' ಕೃತಿಯು ಮಾತ್ರವೇ ಪದ್ಯರೂಪದಲ್ಲಿದೆ; ಅವರ ಗದ್ಯಕೃತಿಗಳು ಅವರೇ ಕರೆದಿರುವಂತೆ ವಚನಪ್ರಸೂನಮಾಲೆಯಾಗಿರುವಂತೆಯೇ ಇದು 'ಪದ್ಯಪ್ರಸೂನಮಾಲೆ'ಯಾಗಿದ್ದು 'ಪದ್ಯಮಾಲಾ' ಎಂಬ ಹೆಸರು ಇದಕ್ಕೆ ತುಂಬಾ ಅನ್ವರ್ಥವಾಗಿದೆ. ಈ ಕೃತಿಯನ್ನು ಪದ್ಯದಲ್ಲಿ ರಚಿಸಲು '**ಪದ್ಯಪಾಠೇ ಮನುಷ್ಯಾಣಾಂ ಶ್ರಮೋ ನಾತಿಭವೇದಿತಿ**' ಎಂಬುದಾಗಿ ಇವರೇ ಕೊಟ್ಟಿರುವ ಕಾರಣವೂ ತುಂಬಾ ಹೃದ್ಯವಾಗಿದೆ. ಅವರ ಎಲ್ಲ ಗ್ರಂಥಗಳೂ ಭಗವತ್ಪೂಜಾರೂಪವೇ ಆಗಿದ್ದು ಪ್ರಕೃತಕೃತಿಯು, ಪೂಜಾಸ್ವರೂಪವನ್ನು ತಿಳಿಸಿಕೊಡುವ '**ಪೂಜಾಪುಷ್ಪ**'ವೇ ಆಗಿದೆ. ಗಾತ್ರದಲ್ಲಿ ತುಂಬಾ ಚಿಕ್ಕದಾಗಿರುವ ಈ ಕೃತಿ, ತಂತ್ರಸಾರೋಕ್ತ 'ದೇವಪೂಜಾಪದ್ಧತಿ'ಯ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತದೆ. ತಂತ್ರಸಾರೋಕ್ತ ಆವಾಹನವಿಧಿ, ಆವರಣ ಪೂಜೆ ಮೊದಲಾದ ವಿಷಯಗಳ ಮಟ್ಟಿಗೆ ಇದು ನೇರ ಶ್ಲೋಕರೂಪ ವ್ಯಾಖ್ಯಾನವೇ ಆಗಿದೆ : (**ಸೂತ್ರತ್ವಾತ್ ತಸ್ಯ ಬೋಧಾರ್ಥಂ ಕ್ವಚಿದ್ವಕ್ಷ್ಯಾಮಿ ವಿಸ್ತರಮ್- ಶ್ಲೋ. ೫೯**). ಸಮಗ್ರ ಪೂಜಾವಿಧಿಯನ್ನು ನಿರೂಪಿಸುವ ಪ್ರತ್ಯೇಕ ವೈಷ್ಣವ ಕೃತಿಗಳಲ್ಲೆಲ್ಲ ಇದೇ ತುಂಬಾ ಪ್ರಾಚೀನ. ಈಶ ಷಟ್ಪ್ರಶ್ನಭಾಷ್ಯಗಳಿಗೆ ಮಾತ್ರವೇ ತಾವು ವ್ಯಾಖ್ಯಾನ ರಚಿಸಿ, ಉಳಿದ ಎಂಟು ಉಪನಿಷದ್ಭಾಷ್ಯಗಳಿಗೆ ಟೀಕೆ ಬರೆಯುವ ಕಾರ್ಯವನ್ನು ತಮ್ಮ ಶಿಷ್ಯ ವ್ಯಾಸತೀರ್ಥರಿಗೆ ಬಿಟ್ಟು ಕೊಟ್ಟಿರುವುದನ್ನು ಗಮನಿಸಿದಾಗ ತಂತ್ರಸಾರಕ್ಕೂ ಶ್ರೀ ವ್ಯಾಸತೀರ್ಥರು ಟೀಕೆ ರಚಿಸಿದ ಕಾರಣ ತಾವು ಅದಕ್ಕೆ ಪ್ರತ್ಯೇಕ ಟೀಕೆಯನ್ನು ರಚಿಸದೆ ಶ್ರೀ ಟೀಕಾಚಾರ್ಯರು ಈ 'ಪದ್ಯಮಾಲೆ'ಯನ್ನು ರಚಿಸಿರಬಹುದೆಂದು ಊಹಿಸಬಹುದು. (ಶ್ರೀ ವ್ಯಾಸತೀರ್ಥರ 'ತಂತ್ರಸಾರಟೀಕೆ' ಇಂದು ಉಪಲಬ್ಧವೂ ಇದೆ). ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಳಿ, ಛಲಾರೀ ಶೇಷಾಚಾರ್ಯರ ತಂತ್ರಸಾರಟೀಕೆ ಮೊದಲಾದ ಅನೇಕ ಪ್ರಾಚೀನ ಗ್ರಂಥಗಳಲ್ಲಿ '**ಜಯತೀರ್ಥೀಯ**' ಎಂಬುದಾಗಿ ಈ ಕೃತಿ ಉಲ್ಲೇಖಿಸಲ್ಪಟ್ಟಿದೆ. ಆವಾಹನವಿಧಿ, ಅಭಿಷೇಕವಿಧಿ, ಆವರಣ ಪೂಜಾ, ನೈವೇದ್ಯ ಸಮರ್ಪಣವಿಧಿ ಮೊದಲಾದ ಅನೇಕ ವಿಷಯಗಳನ್ನು ವಿವರವಾಗಿ ತಿಳಿಸುವುದು ಈ ಕೃತಿಯ ವೈಶಿಷ್ಟ್ಯ. ಕವಾಟೋದ್ಘಾಟನ, ದೀಪಪ್ರಜ್ವಾಲನ ಮೊದಲಾಗಿ ಪ್ರತಿಕಾರ್ಯದಲ್ಲೂ ಪಠಿಸಬೇಕಾದ ವೇದಮಂತ್ರಗಳ ಉಲ್ಲೇಖ ಈ ಕೃತಿಯ ಅಸಾಧಾರಣ ಹಿರಿಮೆ. ಸಂಪ್ರದಾಯಾಗತ ಪೂಜಾಪದ್ಧತಿಯ ಅತ್ಯಂತ ಪ್ರಾಚೀನ

ಲಿಖಿತದಾಖಲೆಯಾಗಿ ಈ ಕೃತಿ ತುಂಬಾ ಮುಖ್ಯವೆನ್ನಿಸುತ್ತದೆ. ಅತ್ಯಂತ ಅನಿವಾರ್ಯ ಕಾರಣ-ಗಳಿಂದಾಗಿ ದೇವಪೂಜೆಯನ್ನು ಮಾಡಲು ಸಾಧ್ಯವಾಗದ ಪ್ರಸಂಗಗಳಲ್ಲಿ ಈ 'ಪದ್ಯಮಾಲೆ' ಯನ್ನು ಸಮಗ್ರ ಪಠಿಸಿದಲ್ಲಿ ಸಾಂಗವಾಗಿ ದೇವಪೂಜೆ ಮಾಡಿದ ಫಲವೇ ಲಭಿಸುತ್ತದೆ ಎಂಬುದು ಇದರ ಫಲಶ್ರುತಿ :

ಪ್ರಮಾದತೋ ನಿರೋಧಾದ್ವಾ ಹರೇಃ ಪೂಜಾ ಭವೇನ್ನ ಚೇತ್ ।
ಪಠನಾತ್ ಪದ್ಯಮಾಲಾಯಾಃ ನರಃ ಪೂಜಾಫಲಂ ಲಭೇತ್ ॥- ಶ್ಲೋ. ೧೨೭

ಶ್ರೀ ಜಯತೀರ್ಥಶ್ರೀಚರಣರ ಇಂತಹ ಅಮೋಘ ಉಪಕಾರವನ್ನು ಸ್ತುತಿಸುವ 'ಪೂಜಾ-ಕಲ್ಪಲತಾ'ಕಾರರ ಮಾತು ಇಲ್ಲಿ ಸ್ಮರಣೀಯವಾಗಿದೆ :

ರಾಜ್ಞೋ ವಾ ಪ್ರತಿರೋಧನೇಽಪಿ ಪರತೋ ಜಾತೇ ಪ್ರಮಾದೇಽಪಿ ವಾ
ಶ್ರೀವಿಷ್ಣೋರಭಿಪೂಜನಸ್ಯ ಘಟನಾ ಸ್ಯಾಚ್ಚೇನ್ನ ಬಂಧಚ್ಛಿದಃ ।
ಯೈಶ್ಶೀರ್ಣಾ ನ ಜಪಾಸ್ತದರ್ಚನಫಲಂ ಶ್ರೀಪದ್ಯಮಾಲಾಕೃತಿಃ
ದಾಸ್ಯತ್ಯೇವಮಕಾರಿ ತಾನ್ ಗುರುವರಾನ್ ಶ್ರೀಮಜ್ಜಯಾರ್ಯಾನ್ ನುಮಃ ॥

'ಶೇಷಾಚಾರ್ಯಪುತ್ರರಾಮಾಚಾರ್ಯ'ರಿಂದ (ಕ್ರಿ.ಪೂ. ೧೬೭೦) ರಚಿತವಾಗಿರುವ 'ಪೂಜಾಕಲ್ಪಲತಾ' ಎಂಬ ಕೃತಿಯು ಪದ್ಯಮಾಲೆಯನ್ನು ಸಮಗ್ರವಾಗಿ ಉದಾಹರಿಸಿ ಪೂಜಾ-ಪದ್ಧತಿಯನ್ನು ವಿವರಿಸುವ ಒಂದು ಅಪೂರ್ವಗ್ರಂಥ. ಪಾಂಪ್ರಿ ಶ್ರೀನಿವಾಸಾಚಾರ್ಯರು ಬರೆದಿರುವ ಒಂದು ವ್ಯಾಖ್ಯಾನವು ಸಹ ಪದ್ಯಮಾಲೆಗೆ ಉಪಲಬ್ಧವಿದೆ; ಪೂಜಾಕಲ್ಪಲತಾವನ್ನು ಹಲವು ಸಲ ಈ ಟೀಕೆ ಉಲ್ಲೇಖಿಸುತ್ತದೆ. ಪದ್ಯಮಾಲೆಯನ್ನು ಆಧರಿಸಿ ಶ್ರೀ ವೇದವ್ಯಾಸತೀರ್ಥರು, ಶ್ರೀ ಸುಮತೀಂದ್ರತೀರ್ಥರು, ಶ್ರೀಸತ್ಯವ್ರತತೀರ್ಥರು, ಶ್ರೀ ವರದೇಂದ್ರತೀರ್ಥರು ಮೊದಲಾದ ಮಹನೀಯರು ಪೂಜಾಪದ್ಧತಿಗಳನ್ನು ಬರೆದಿದ್ದಾರೆ. ಇದರ ಮೇಲ್ಪಂಕ್ತಿಯಲ್ಲಿ ರಚಿತವಾಗಿರುವ ಕೆಲವು ಶ್ಲೋಕರೂಪ ಗ್ರಂಥಗಳು ಸಹ 'ಪೂಜಾವಿಧಿ'ಯ ಬಗ್ಗೆ ದೊರೆಯುತ್ತವೆ. ಶ್ರೀಸತ್ಯ-ವಿಜಯತೀರ್ಥಶಿಷ್ಯ ವರಖೇಡಿಶ್ರೀನಿವಾಸಾಚಾರ್ಯಸಂಗ್ರಹೀತ ದೇವಪೂಜಾಪದ್ಧತಿ ಶ್ಲೋಕ-ರೂಪಗ್ರಂಥಗಳಲ್ಲಿ ದೊಡ್ಡದು.

## ಶ್ರೀಜಯತೀರ್ಥರು ಮತ್ತು ಹರಿದಾಸಸಾಹಿತ್ಯ

ಈ ಸಂಸ್ಕೃತಕೃತಿಗಳನ್ನಲ್ಲದೆ 'ನೀಲಮೇಘಶ್ಯಾಮನ ಕೋಮಲಾಂಗನ ಕಂಡೆ ನಾ' ಎಂಬ ಕನ್ನಡ ಕೀರ್ತನೆಯೊಂದನ್ನು ಸಹ ಇವರು ರಚಿಸಿರುವಂತೆ ನನ್ನ ಸಂಗ್ರಹದಲ್ಲಿನ ಹಸ್ತಪ್ರತಿಗಳಿಂದ ತಿಳಿದುಬರುತ್ತದೆ.

ನೀಲಮೇಘಶ್ಯಾಮನ ಕೋಮಲಾಂಗನ ಕಂಡೆ ನಾ ॥ ಪ ॥

ತರುಣತರಣಿಯ ತೇಜವ ಪೋಲುವ ಸಿರಿ ಮಕುಟದ
ಫಾಲದಿಂ ಮೃಗನಾಭಿತಿಲಕವು ಶೋಭಿಪ ಕೊರಳಾಲಿಯ ॥ ಅ.ಪ. ॥

ಭ್ರೂಯುಗಳ ಕಂಗಳು ಸುನಾಸಿಕ ಮಕರಕುಂಡಲಕರ್ಣದ
ಫಾಲದಿಂ ಥಳಥಳಿಪ ಕಪೋಲದ ಕಾಂತಿಯನು ಕಡುರಂಜಿಸುವ
ಬಿಂಬಾಧರೋಷ್ಠದ ಮಂದಹಾಸದ ಚಂದ್ರಕಿರಣಗಳ
ಸೋಲಿಸುವ ಸುಲಿಪಲ್ಲ ಕಂಧರಮಾಲಿಯ ಕಂಬುಗ್ರೀವನ ॥ ೧ ॥

ಕರಿಕರದ ವಾಲ ಪೋಲುವ ಚತುರ್ಭುಜದ ಕಂಕಣಮುದ್ರಿಕೆಯ
ಪೇರುರದಲೊಪ್ಪುವ ವೈಜಯಂತೀಮಾಲೆ ಶೋಭಿಪನಾ
ಸಿರಿಯು ಶೃಂಗರಿಸುವ ವಕ್ಷದ ಸರಸಿಜಾಸನಜನಿತನಾಭಿಯ
ವರಕಟಿಯ ಮ್ಯಾಲೆಸೆವ ಪೀತಾಂಬರ ವಿರಾಜಿತನ ॥ ೨ ॥

ಧರೆಯ ಈರಡಿ ಮಾಡಿ ದನುಜರ ಸದೆದು ದಿವಿಜರ
ಪೊರೆವ ಭಾಪುರೆ ವರರತುನ ಕಂಕಣ ನ್ಯಾವಳ ತೊ-
ಡರಿನಿಂದೆಸೆವ ಚರಣವನರುಹ ಜಯಜಯಾಕ್ಷೋಭ್ಯ-
ತೀರಥ ರಾಮವಿಠಲನ ನೀಲಮೇಘಶ್ಯಾಮನ ॥ ೩ ॥

- ಈ ಕೃತಿ ಶ್ರೀ ಟೀಕಾಕೃತ್ಕೃತ ಎಂದು ನನ್ನ ಸಂಗ್ರಹದಲ್ಲಿ(ಶ್ರೀಜಯತೀರ್ಥಸಂಸ್ಕೃತಹಸ್ತ-ಲಿಖಿತಗ್ರಂಥಾಲಯ, ವ್ಯಾಸನಕೆರೆ)ನ ಒಂದು ಹಸ್ತಪ್ರತಿಯಲ್ಲಿದೆ. ಅವರ ಸಮಗ್ರಕೃತಿಗಳ ಆದ್ಯಂತಶ್ಲೋಕಗಳ ಸಂಗ್ರಹದ ಪ್ರತಿಯೊಂದರಲ್ಲೂ ಇದು ಸಮಗ್ರವಾಗಿ ಲಿಖಿತವಾಗಿದೆ; ಎರಡು ಪ್ರತಿಗಳಲ್ಲೂ ಅಕ್ಷರಸ್ಖಾಲಿತ್ಯ ಕಂಡುಬರುತ್ತದೆ.

ಇದರಿಂದ ಶ್ರೀಜಯತೀರ್ಥರು **ರಾಮವಿಠಲ** ಎಂಬ ಅಂಕಿತದಿಂದ ಹರಿದಾಸಸಾಹಿತ್ಯಕ್ಕೆ ಕಾಣಿಕೆ ಇತ್ತ ವಿವರ ಬೆಳಕಿಗೆ ಬರುತ್ತದೆ. ವಿಟ್ಠಲ ಎಂಬ ಪ್ರಯೋಗ ಅಂಕಿತದಲ್ಲಿ ಪ್ರಪ್ರಥಮ ಬಾರಿಗೆ ಶ್ರೀಜಯತೀರ್ಥರಿಂದಲೇ ಆರಂಭವಾದದ್ದು ಎಂಬುದು ಇದರಿಂದ ತಿಳಿಯುವ ಮತ್ತೊಂದು ವಿಶೇಷಾಂಶ. ಇಲ್ಲಿ ಅಕ್ಷೋಭ್ಯತೀರ್ಥರ ಪ್ರಸ್ತಾಪವೂ ಬಂದಿರುವುದು ಇದು ಜಯತೀರ್ಥರ ರಚನೆ ಎಂಬುದಕ್ಕೆ ಮತ್ತೊಂದು ಗಮಕ ಎಂದೂ ಭಾವಿಸಬಹುದು.

ಇದರಿಂದ ಶ್ರೀಹರಿದಾಸಸಾಹಿತ್ಯಕ್ಕೂ ಶ್ರೀಜಯತೀರ್ಥರ ಅಮೂಲ್ಯ ಕೊಡುಗೆ ಸಂದಿ-ರುವುದು ತಿಳಿದುಬರುತ್ತದೆ. ಇದರಿಂದ ಶ್ರೀನರಹರಿತೀರ್ಥರ ಅನಂತರ ಕಾಲದಲ್ಲಿ ದೇವರನಾಮ ರಚಿಸಿದ ಯತೀಶ್ವರರಲ್ಲಿ ಮೊದಲಿಗರು ಶ್ರೀಜಯತೀರ್ಥರು ಎಂದಾಗುವುದು. ಮುಂದೆ ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು ಮತ್ತು ಶ್ರೀವಾದಿರಾಜರು ಎಂಬ ಯತಿತ್ರಯರಿಂದ ಹರಿದಾಸಸಾಹಿತ್ಯ ಅಗಾಧವಾಗಿ ಬೆಳೆಯಿತು ಎಂಬುದು ಸುಪ್ರಸಿದ್ಧ.

ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯವಿದೆ.

## ಶ್ರೀ ಜಯತೀರ್ಥರ ದಿನಚರಿ

ಶ್ರೀಜಯತೀರ್ಥರ ದಿನಚರಿಯು ಸಾಧಕರಿಗೆ ಅತ್ಯಂತ ಮಾರ್ಗದರ್ಶಕವಾದುದು. ಶ್ರೀವ್ಯಾಸತೀರ್ಥರು ಸಂಗ್ರಹಿಸಿರುವಂತೆ ಅವರ ನಿತ್ಯವಿಧಿ ಹೀಗಿತ್ತು :

ಯತಿಗಳಿಗೆ ವಿಹಿತವಾದ ಬ್ರಾಹ್ಮಮುಹೂರ್ತದಲ್ಲಿ ತೀರ್ಥಸ್ನಾನ, ಅನಂತರ ಯತಿಗಳಿಗೆ ವಿಹಿತವಾದ ಪರಮಮಂತ್ರವಾದ ಪ್ರಣವಮಂತ್ರದ ಜಪ, ಅನಂತರ ಇತರ ಮಹಾಮಂತ್ರಗಳ ಜಪ, ಅನಂತರ ತರ್ಪಣ, ಅನಂತರ ದೇವಪೂಜೆಯನ್ನು ಪ್ರಾರಂಭಿಸಿ, ನಿರ್ಮಾಲ್ಯವಿಸರ್ಜನ, ಅನಂತರ ಮಠಕ್ಕೆ ತೆರಳಿ ಸಂಸ್ಥಾನಪ್ರತಿಮೆಗಳ ಪೂಜೆ, ಅನಂತರ ನಿರ್ಮಾಲ್ಯತೀರ್ಥಸ್ವೀಕಾರ, ಶಿಷ್ಯರಿಗೆ ಮಂತ್ರೋಪದೇಶ, ತಪ್ತಮುದ್ರಾಪ್ರದಾನ, ಅನಂತರ ಶಿಷ್ಯರಿಗೆ ಪಾಠಪ್ರವಚನಗಳಿಂದ ಶಿಷ್ಯಶಿಕ್ಷಣ, ಅನಂತರ ಪುನಃ ಸ್ನಾನ, ಅನಂತರ ಮಹಾಪೂಜೆ, ಅನಂತರ ತೀರ್ಥಪ್ರಸಾದಸ್ವೀಕಾರ, ಅನಂತರ ಸಾಯಂಕಾಲದವರೆಗೂ ಪಾಠಪ್ರವಚನಗಳು, ಪುನಃ ಸ್ನಾನ ಮತ್ತು ಸಾಯಂಕಾಲದ ಪೂಜೆ, ಅನಂತರ ತತ್ತ್ವಶಾಸ್ತ್ರವಿನೋದ, ಭಗವದ್ಧ್ಯಾನಗಳಿಂದ ರಾತ್ರಿಶೇಷಯಾಪನೆ[೧].

## ಮಳಖೇಡದಲ್ಲಿ ಬೃಂದಾವನ ಪ್ರವೇಶ

ಶ್ರೀಜಯತೀರ್ಥರು ಉತ್ತರಭಾರತದ ಸಂಚಾರದಲ್ಲಿದ್ದಾಗ ತ್ರಿವೇಣೀಸಂಗಮದ ಪವಿತ್ರ ಪರಿಸರದಲ್ಲಿ ತಮ್ಮ ಉತ್ತರಾಧಿಕಾರಿಗಳಾಗಿ ಶ್ರೀವಿದ್ಯಾಧಿರಾಜತೀರ್ಥರಿಗೆ ಆಶ್ರಮ ನೀಡಿದರು. ಅವರು ನಿರ್ಮಲವಿಚಾರಶೀಲರೂ, ಪ್ರವಚನಚತುರರೂ, ವಾದಿನಿಗ್ರಹಕೋವಿದರೂ ಆದ ಮಹನೀಯರೆನ್ನಿಸಿದರು. ಹೀಗೆ ತಮ್ಮ ಉತ್ತರಾಧಿಕಾರಿಯ ಆಯ್ಕೆಯಲ್ಲೂ ಶ್ರೀಜಯತೀರ್ಥರು ವಿಶಿಷ್ಟ-

---

೧. ಸ್ನಾತ್ವಾ ಕಾಲೇಽಬ್ಜಜಸ್ಯ ಪ್ರಣವಪರಮನುಂ ತ್ವನ್ಯಮಂತ್ರಾಂಶ್ಚ ಜಪ್ತ್ವಾ
ಮಂತ್ರಾರ್ಘ್ಯಂ ಜಾನು ದತ್ವಾ ಹರಿಶಿರಸಿಗತಂ ಪುಷ್ಪಮಾಲಾದಿ ಮಾರ್ಷ್ಟಿ ।
ಸರ್ವೇಷಾಂ ವ್ಯಾಸರೂಪಾಣ್ಯಮಿತಪದತತಿಂ ದರ್ಶಯಿತ್ವಾ ಮಠಂ ದ್ರಾಗ್
ಗತ್ವಾ ದೇವಸ್ಯ ಪೂಜಾಂ ಪ್ರಶಮಿತಮನಸಾ ಸಾಧು ಕೃತ್ವಾ ನನಾಮ ॥
ತೀರ್ಥಂ ಸೇವ್ಯಾಗತಾನಾಮಪಿ ಪರಮಮತಿಃ ಶ್ರಾವಯಿತ್ವಾ ಮನುಂ ದ್ರಾಕ್
ತಪ್ತೇ ಮುದ್ರೇ ಪ್ರದಾಯ ಪ್ರವಚನಮಕರೋಚ್ಛಿಷ್ಯಜಾಲಂ ಪ್ರಹರ್ಷನ್ ।
ಪಶ್ಚಾತ್ ಸ್ನಾನಂ ವಿಧಾಯ ತ್ವಮಲಗುಣಗಣಂ ಪೂಜಯಿತ್ವಾ ದ್ವಿಜೇಂದ್ರೈಃ
ಸಾಕಂ ಭುಕ್ತ್ವಾ ಪ್ರಸಾದಂ ಪುನರಪಿ ಕೃತವಾನ್ ಸ್ನಾನಪೂಜೇ ನಮಶ್ಚ ॥
ಪಶ್ಚಾತ್ ತತ್ತ್ವಪ್ರಸಂಗಂ ಪ್ರವಿತತಮನಸಾ ಸಾಧುಭಿಃ ಸಾಧು ಕೃತ್ವಾ
ಧ್ಯಾಯನ್ ವಿಷ್ಣೋರ್ಗುಣಾಂಸ್ತಾನಮಲಹೃದಯತೋ ರಾತ್ರಿಶೇಷಂ ನಿನಾಯ ।
ಏವಂ ಕಾಲಂ ನಯನ್ ಸಃ ಸಕಲಭುವಿಗತಂ ತೀರ್ಥಜಾಲಂ ನಿಷೇವ್ಯ
ತತ್ತದ್ರಾಷ್ಟ್ರಸ್ಥವಾದೀನಜಯದನುದಿನಂ ಜಂಬುಕಾನ್ ಸಿಂಹವಚ್ಚ ॥
– ಅಣುಜಯತೀರ್ಥವಿಜಯ (ಶ್ಲೋ. ೨೯-೩೧)

...ಸ್ನಾತ್ವಾ ಬ್ರಾಹ್ಮೇಽಥ ಜಪ್ತ್ವಾ ಪ್ರಣವಮನುಮುಪೈತ್ ಸೋಽಥ ನಿರ್ಮಾಲ್ಯಸೇವಾಮ್ ॥
ದತ್ವಾ ಶಿಷ್ಯೇಷು ಮುದ್ರಾಂ ಮನುಮಪಿ ಸ್ವಜನಾನ್ ವ್ಯಾಖ್ಯಯಾ ನಂದಯನ್ ಯೋ
ಮಧ್ಯಾಹ್ನೇ ರಾಮಪೂಜಾಮಚಲಿತಮನಸಾ ತತ್ಪ್ರಸಾದಂ ಚ ಗೃಹ್ಣನ್ ।
ರಾತ್ರೌ ಋಗ್ಭಾಷ್ಯಕಾದ್ಯೈಃ ಸುಜನಪರಿವೃತೋ ಮೋದಯನ್ ಶ್ರೀಶಪಾದಂ
ಭೂಮೌ ನಿತ್ಯಂ ಸುಸೇವಾಂ ಪ್ರವಿತತಮನಸಾ ಶೋಧಯನ್ ತೀರ್ಥಜಾಲಮ್ ॥
– ಶ್ರೀಬಿದರಹಳ್ಳಿ ಶ್ರೀನಿವಾಸತೀರ್ಥಕೃತಶ್ರೀಜಯಾರ್ಯಸ್ತುತಿಃ (ಶ್ಲೋ. ೧೨, ೧೩.)

ಮೇಲ್ಪಂಕ್ತಿಯನ್ನು ಹಾಕಿಕೊಟ್ಟು ಮಾನ್ಯರಾಗಿರುವರು. ಹೀಗೆ ಪಾಠಪ್ರವಚನ, ತಪಸ್ಸು, ಗ್ರಂಥರಚನೆ, ತೀರ್ಥಸಂಚಾರ, ವಾದಿಜಯ ಮೊದಲಾದ ಅಸಾಧಾರಣವಾದ ಮಹತ್ಕಾರ್ಯಗಳನ್ನು ಅವಿರತವಾಗಿ ಮಾಡುತ್ತಲೇ ಬಾಳಿದ ಶ್ರೀಜಯತೀರ್ಥರು ಇಡೀ ಪರಂಪರೆಗೇ ಆದರ್ಶಪ್ರಾಯ-ರಾದರು. ಒಟ್ಟು ಇಪ್ಪತ್ತೊಂದು ವರ್ಷಗಳ ಕಾಲ ಸರ್ವಜ್ಞಪೀಠವನ್ನು ಸಮರ್ಥವಾಗಿ ಪಾಲಿಸಿ, ತಮ್ಮ ಮುಖ್ಯಕಾರ್ಯಕ್ಷೇತ್ರಗಳಲ್ಲೊಂದಾದ 'ಮಳಖೇಡ'ದಲ್ಲೇ ವೃಂದಾವನಸ್ಥರಾದರು[೧].

---

೧. ಮಳಖೇಡವೇ ಅವರ ಮೂಲ ಬೃಂದಾವನ ಸ್ಥಳವೆನ್ನಲು ಅನೇಕ ಪ್ರಮಾಣಗಳಿದ್ದು, ಅವುಗಳಲ್ಲಿ ಮುಖ್ಯವಾದ ಕೆಲವು ಹೀಗಿವೆ :

೧. ಧ್ಯಾಯನ್ಮಲಯಖೇಟೇऽಸೌ ರಾಮಪಾದಾಬ್ಜಯುನ್ಮುನಿಃ ।
ಉತ್ಕ್ರಾಂತಃ ಸ್ವಂ ವಪುರ್ಭೇಜೇ ನಾಕಿಭಿಃ ಪರಿಪೂಜಿತಃ ॥ ಜಯೀಂದ್ರೋದಯ ೬/೭೨

೨. ವೃಂದಾವನೇ ಸ್ವಸೇವಾಕರಾಣಾಂ ಸರ್ವದೈವ ಸರ್ವೇಷ್ಟಮ್ ।
ದಾಸ್ಯನ್ ಮಳಖೇಡಸ್ಥೇ ತಾರ್ತಿಯೇನಾಸ್ತಿ ಸನ್ನಿಧಾನೇನ ॥
-ರಘುದಾಂತತೀರ್ಥರ ಜಯತೀರ್ಥವಿಜಯ ಶ್ಲೋ-೫೫.

೩. ಆಷಾಢಕೃಷ್ಣಪಂಚಮ್ಯಾಂ ವಿಭವಾಭಿಧವತ್ಸರೇ ।
ಕಾಗಿನೀಕೂಲಸಂಶೋಭಿ ಮಲಖೇಡಾಖ್ಯಸತ್ಪುರೇ ॥
ಸೀತಾರಾಮಂ ಸ್ಮರಂಶ್ಚಿತ್ತೇ ಲಯಚಿಂತನಪೂರ್ವಕಮ್ ।
ಪ್ರವಿವೇಶ ಹರಿಂ ಸ್ಮೃತ್ವಾ ಮುನಿರ್ವೃಂದಾವನಂ ತದಾ ॥
– ಜಯತೀರ್ಥಗುಣರತ್ನಮಾಲಾ ೩/೩೭,೩೮

೪. 'ಮಳಖೇಡದಲ್ಲಿ ಶ್ರೀಟೀಕಾಚಾರ್ಯರು ಗುಹಾದಲ್ಲಿ ಪ್ರವೇಶಿಸಿದರು'.
-ಶ್ರೀವ್ಯಾಸರಾಜರ ಶಿಷ್ಯರಾದ ಶ್ರೀ ನಾರಾಯಣತೀರ್ಥರ ಕೈಬರಹದ ದಾಖಲೆ.
(ವಿವರಗಳಿಗೆ ''ತತ್ತ್ವವಾದ'' ನವೆಂಬರ್ ೧೯೮೦ ಮತ್ತು ಜನವರಿ ೧೯೮೭ ಸಂಚಿಕೆಯಲ್ಲಿನ ನನ್ನ ಲೇಖನಗಳನ್ನು ನೋಡಿರಿ.)

೫. ಶ್ರೀಮತ್ಕಾಗಿನೀತೀರಮಂದಿರಂ ಯತಿಶೇಖರಮ್ ।
ಶ್ರೀಗುರುಂ ಜಯತೀರ್ಥಾಖ್ಯಂ ಸಾದರಂ ನೌಮಿ ಸಂತತಮ್ ॥
– ಶ್ರೀ ರಘುನಾಥತೀರ್ಥರು (?)

೬. ತತಸ್ತು ಜಯತೀರ್ಥಾಸ್ತೇ ಜಿತ್ವಾ ವಾದಿಗಣಾನ್ ಬಹೂನ್ ।
ವೃಷ್ಟಿಖೇಟಂ ಸಮಾಗತ್ಯ ಗುರೋರ್ವೃಂದಾವನಾಂತಿಕೇ ॥
ವಿದ್ಯಾಧಿರಾಜತೀರ್ಥೇಭ್ಯೋ ದತ್ವಾ ಸಂಸ್ಥಾನಮುತ್ತಮಮ್ ।
ವಿಭವಾಷಾಢಕೃಷ್ಣಾಹಿದಿನೇ ಹರಿಪದಂ ಯಯುಃ ॥
– ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು ೭/೧-೩.

೭. ವಿಭವಾಷಾಢಪಂಚಮ್ಯಾಂ ಕೃಷ್ಣಾಯಾ ಜಯತೀರ್ಥರಾಟ್ ।
ಭೇಜೇ ವಿಷ್ಣುಪದಂ ತೀರೇ ಕಾಗಿನ್ಯಾ ಮಳಖೇಡಗೇ ॥ – ಗುರುಚರ್ಯಾ

೮. ದುರ್ಗೋಲ್ಲಸನ್ಮಲಯಖೇಟಪುರೋಪಕಂಠ-
ಸತ್ಕಾಗಿನೀಪುಳಿನಸುಂದರಮಂದಿರಸ್ಥಮ್ ।

ಅಕ್ಷೋಭ್ಯತೀರ್ಥಜಯರಾಟ್‌ರಘುನಾಥತೀರ್ಥ-
ವೃಂದಾವನತ್ರಿತಯಮಾನಮದೇಷ ಸಾಧುಃ ॥ – ಶ್ರೀ ಸತ್ಯಸಂಧವಿಜಯ ೫/೨೬

೯. 'Malkhed' is famous as a holy place, where the mortal remains of Sri Tikacharya interred; 'The Brindavan of Tikacharaya is situated at Malkhed' -Mys. State Gazetteer, Gulbarga Dt. Pp.17, 467.

೧೦. ಸಮಾಪ್ಯವಿರತಂ ಶ್ರೀಮದವಧೂತಶಿರೋಮಣೀನ್ ।
ಕಾಗಿನೀತೀರಸಂವಾಸಿಸಮಾಹ್ವಾನ್ ದೀನರಕ್ಷಕಾನ್ ॥
– ಶ್ರೀಜಂಬುಖಂಡೀ ವಾದಿರಾಜಾಚಾರ್ಯಕೃತ ವಿಷ್ಣುತೀರ್ಥವಿಜಯ

೧೧. ಯೋಗಿಗಳರಸನೆ ಮಳಖೇಡನಿವಾಸ
ಕಾಗಿನೀತಟವಾಸ ವಿಜಯವಿಠಲದಾಸ – ಶ್ರೀವಿಜಯದಾಸರು

೧೨. ಮೋಕ್ಷದಾತರ ಅಕ್ಷೋಭ್ಯತೀರ್ಥರ ।
ಸಾಕ್ಷಿಲಿಪ್ತರ ಅಪೇಕ್ಷರಹಿತರ ॥ – ಶ್ರೀವಿಜಯದಾಸರು

೧೩. ಮೇಘನಾಥಪುರ ಕಕುರ ವೇಣೀಪುರವಾಸ
ರಾಘವೇಶ ವಿಜಯವಿಠಲನ್ನ ನಿಜದಾಸ ॥ – ಶ್ರೀವಿಜಯದಾಸರು

೧೪. ಮಳಖೇಡ ಕಾಗಿನೀತೀರವಾಸ – ಶ್ರೀವರದೇಶವಿಠಲರು

೧೫. ಆಷಾಢ ಬಹುಳ ಪಂಚಮಿಯು ಬರುತ-ಕಳೇವರವನೆ ಬಿಡುತ
ವ್ಯಾಸವಿಠಲನ ಪದದಲೇ ನಿರುತ- ಮಳಖೇಡದೊಳು ಸತತ । – ಕಲ್ಲೂರು ಸುಬ್ಬಣ್ಣದಾಸರು.

೧೬. ಮಳಖೇಡದೊಳು ಬಂದು ತೊರವಿ ನರಹರಿಪಾದ-
ಗಳ ಸ್ಮರಿಸಿ ವೃಂದಾವನಕೊಂಡ ರಾಯರಿಗೆ
–'ತೊರವಿ ನರಹರಿ ಕವಿ'ಯ ಕನ್ನಡ 'ಜಯತೀರ್ಥವಿಜಯ'.

೧೭. ಪರಮ ಪಾವನ ವೃಂದಾವನ ಮಳಖೇಡ ಕಾಗಿನೀ ನದಿ
ತೀರದಿ ತಪವಾಚರಿಸುತ ಗುರುಗಳು ಇರುವರ್ಯತಿಗಳ್ಹನ್ನೆರಡು ಮಂದಿ
ರಘುನಾಥಅಕ್ಷೋಭ್ಯತೀರ್ಥರ ನಡುವೆ ಕುಳಿತಿದ್ದಂಥ
ಟೀಕೆ ಬರೆದ ಜಯ ಮಹರಾಯರಿವರು – ಪಾಲಿಸೆನ್ನನು ಜಯರಾಯ
– 'ಹರಪನಹಳ್ಳಿ ಭೀಮವ್ವನ ಹಾಡುಗಳು' ಪು.೧೭೪, ಮೈ.ವಿ. ಪ್ರಕಟಿತ ೧೯೮೪.

೧೮. He passed away at Malkhed in 1388, His mortal remains lie entombed here. -Dr. B.N.K. Sharma (Philosophy of Madhvacharya, P xv)

೧೯. Jayathirtha died in Malkhed.
-B. Venkoba Rao - (Introduction to Vyasayogicharita P. Xlii)

೨೦. (ಶ್ರೀಟೀಕಾಕೃತ್ಪಾದರು)....ಮಳಖೇಡಕ್ಕೆ ಹೋಗಿ ಅಲ್ಲಿ ೧೩೮೮ನೇ ವಿಭವ ಆಷಾಢಕೃಷ್ಣ ಪಂಚಮೀದಿನ ಹರಿಧ್ಯಾನಪರರಾದರು.
-ಹೆಚ್.ಕೆ. ವೇದವ್ಯಾಸಾಚಾರ್ಯ (ಗುರುಚರಿತೆ ಪು. ೧೦೧).

ಪ್ರಾಯಃ ಅವರ ವಯಸ್ಸು ಆಗ ಇನ್ನೂ ಐವತ್ತನ್ನೂ ಮುಟ್ಟಿರಲಿಲ್ಲ ಎಂಬುದು ಮತ್ತೊಂದು ಗಮನಾರ್ಹ ಅಂಶ. ವಾದಿನಿಗ್ರಹ, ಗ್ರಂಥರಚನೆ, ತೀರ್ಥಸಂಚಾರ, ಪಾಠಪ್ರವಚನ, ಶಿಷ್ಯ-ಸಂಗ್ರಹ ಮೊದಲಾದ ಅತ್ಯಂತ ಬಹುಮುಖ ಸಾಧನೆಯನ್ನು ಅಷ್ಟು ಅಲ್ಪಕಾಲದಲ್ಲಿ ಅನನ್ಯವಾಗಿ ಪೂರೈಸಿದ ದಿವ್ಯಚೇತನ ಅವರದು. ಅವರು ವೃಂದಾವನಸ್ಥರಾದ ವರ್ಷ ವಿಭವ ಸಂವತ್ಸರ (೧೩೮೮); ಮಾಸ ಆಷಾಢ; ತಿಥಿ ಕೃಷ್ಣಪಕ್ಷದ ಪಂಚಮೀ. ಹೀಗೆ ಕೃಷ್ಣಪಕ್ಷದಲ್ಲಿ ವೈಕುಂಠಯಾತ್ರೆ ಮಾಡುವ ಮೂಲಕ ತಾವು ಸದಾ ಕೃಷ್ಣಪಕ್ಷದಲ್ಲೇ ಇದ್ದು ಕೃಷ್ಣನ ಪಾದವನ್ನೇ ಸೇರುವ ಪರಮ-ವೈಷ್ಣವರು ಎಂಬ ತತ್ತ್ವವನ್ನೂ ಸಾರಿರುವರು. ಹೀಗೆ ಅವರು ಬರೆದದ್ದು ಶಾಸ್ತ್ರವಾದರೆ, ಅವರ ಜೀವನವೂ ಅಧ್ಯಯನಯೋಗ್ಯಶಾಸ್ತ್ರವೆನ್ನಿಸಿದ್ದು ವಿಶೇಷ. ಆದ್ದರಿಂದ ಅವರ ಶಾಸ್ತ್ರಗಳೊಂದಿಗೆ ಅವರ ಜೀವನದ ವಿವರಗಳನ್ನು ಅಧ್ಯಯನ ಮಾಡುವುದು ಸಾಧಕರ ವಿಶೇಷಕರ್ತವ್ಯ.

ಹೀಗೆ ದ್ವೈತವೇದಾಂತ ಪ್ರಪಂಚದ ಅಸಾಮಾನ್ಯ ಟೀಕಾಕಾರರಾಗಿರುವ ಶ್ರೀಜಯತೀರ್ಥ-ರನ್ನು ಶ್ರೀವ್ಯಾಸರಾಜರು (ತಾತ್ಪರ್ಯಚಂದ್ರಿಕಾ), ಶ್ರೀರಾಘವೇಂದ್ರರು (ನ್ಯಾಯಸುಧಾಪರಿಮಳ, ಚಂದ್ರಿಕಾಪ್ರಕಾಶ) ಶ್ರೀವಾದೀಂದ್ರರು ಮೊದಲಾದವರು ತತ್ತ್ವಜ್ಞಾನದ 'ಸೂರ್ಯ' ಎಂದೂ, ಶ್ರೀವಾದಿರಾಜರು 'ಕೃತಾರ್ಥ'(ತೀರ್ಥಪ್ರಬಂಧ)ರೆಂದೂ, ಶ್ರೀ ರಾಘವೇಂದ್ರರು 'ಜ್ಞಾನಾಬ್ಧಿ' (ಪರಿಮಳ)ಗಳೆಂದೂ, ಶ್ರೀವಿದ್ಯಾಧೀಶರು 'ಅರ್ಜುನ' (ಸುಧಾವಾಕ್ಯಾರ್ಥಚಂದ್ರಿಕಾ) ಎಂದೂ, ಶ್ರೀಸತ್ಯಧರ್ಮಸ್ವಾಮಿಗಳು 'ಟೀಕಾಕೃತ್ಪಾದ' (ಭಾಗವತಟಿಪ್ಪಣೀ)ರೆಂದೂ, ಶ್ರೀಸುಮತೀಂದ್ರ ಸ್ವಾಮಿಗಳು (ಪ್ರಮೇಯದೀಪಿಕಾ ಭಾವರತ್ನಕೋಶ), ವೈಶ್ವನಾಥಿ ನಾರಾಯಣಾಚಾರ್ಯರು (ಅದ್ವೈತಕಾಲಾನಲ) ಮೊದಲಾದವರು 'ಕ್ಷೀರಸಮುದ್ರ' ಎಂದೂ, ಶ್ರೀರಘೂತ್ತಮತೀರ್ಥರು (ಬೃಹದ್ಭಾಷ್ಯಭಾವಬೋಧ) ಶ್ರೀವೇದೇಶತೀರ್ಥರು (ಛಾಂದೋಗ್ಯಭಾಷ್ಯಟೀಕಾ) ಬಿದರಹಳ್ಳಿ ಶ್ರೀನಿವಾಸತೀರ್ಥರು (ಪ್ರಮಾಣಲಕ್ಷಣ ಟಿಪ್ಪಣೀ) ಪಾಂಡುರಂಗಿ ಕೇಶವಾಚಾರ್ಯರು (ಸುಧಾಶೇಷವಾಕ್ಯಾರ್ಥಚಂದ್ರಿಕಾ) ಮೊದಲಾದವರು 'ಇಂದ್ರ' ಎಂದೂ ತಾಮ್ರಪರ್ಣೀ ಆನಂದತೀರ್ಥಾಚಾರ್ಯರು (ಸತ್ತತ್ತ್ವರತ್ನ ಮಾಲಾ) 'ಚಂದ್ರ' ಎಂದೂ, ಪರಿಪರಿಯಾಗಿ ಸ್ತುತಿಸಿ ಗೌರವಿಸಿದ್ದಾರೆ. ಅಂತೂ ಶ್ರೀಜಯತೀರ್ಥರನ್ನು ಗೌರವಿಸದ ಒಬ್ಬ ಗ್ರಂಥಕಾರರೂ ಸಹ ಅನಂತರದಲ್ಲಿ ದೊರೆಯುವುದಿಲ್ಲ. ಇವರ ನ್ಯಾಯಸುಧೆ ಸಮಗ್ರ ತತ್ತ್ವಶಾಸ್ತ್ರಪಯೋನಿಧಿಯ ಮಂಥನದ ದಿವ್ಯಸುಧೆಯೇ ಆಗಿದೆ :

ಅನುವ್ಯಾಖ್ಯಾಮೃತಾಂಭೋಧೇಃ ಸಮುತ್ಪನ್ನಾತಿನಿರ್ಮಲಾ ।
ಇಯಂ ನ್ಯಾಯಸುಧಾ ಭೌಮೈರ್ವಿಬುಧೈಃ ಸೇವ್ಯತಾಂ ಸದಾ ॥ - ನ್ಯಾಯಸುಧಾ

---

೨೧. ಎಲ್ಲ ಪ್ರಮುಖ ಮಠಗಳಲ್ಲಿ, ಹಸ್ತಪ್ರತಿ ಗ್ರಂಥಾಲಯಗಳಲ್ಲಿ, ಇರುವ ನೂರಾರು ಲಿಖಿತ ದಾಖಲೆಗಳು ಮತ್ತು ಕೆಲವು ವರ್ಷಗಳ ಹಿಂದಿನ ಎಲ್ಲ ಮಠದ ಪಂಚಾಂಗಗಳು.)

"…. **ಶ್ರೀಕರೋಽಯಂ ಗ್ರಂಥಃ। ತತ್ರ ವಯಮೇವ ಸಾಕ್ಷಿಣಃ**" ಎಂದು [೧]ಶ್ರೀವಾದಿರಾಜರಂತಹ ಮಹನೀಯರು ಇವರ ನ್ಯಾಯಸುಧೆಯ ಬಗ್ಗೆ ನುಡಿದಿರುವ ಮಾತುಗಳು (ನ್ಯಾಯಸುಧಾಗುರ್ವರ್ಥದೀಪಿಕಾ) ಒಂದರ್ಥದಲ್ಲಿ ಶ್ರೀಜಯತೀರ್ಥರ ಇಡೀ ವಾಙ್ಮಯತಪಸ್ಸಿನ ಸಾರ್ಥಕ ಮೌಲ್ಯಮಾಪನವೇ ಆಗಿದೆ; ಇವರ ಗ್ರಂಥಗಳ ಶ್ರವಣಮನನಗಳು ಶ್ರೀವ್ಯಾಸಮಧ್ವರ ಹೃದಯವನ್ನೇ ತೆರೆದಿಡುವ ಮಹಾದ್ವಾರಗಳಾಗಿದ್ದು ತದ್ದ್ವಾರಾ ಮೋಕ್ಷಾಖ್ಯ ಮಹಾ ಶ್ರೀ(ಸಂಪತ್)ಕರವೇ ಆಗಿವೆ.

## ಶ್ರೀ ಜಯತೀರ್ಥರ ಕೆಲವು ಮುಖ್ಯ ಕಾರ್ಯಕ್ಷೇತ್ರಗಳು

### ೧. ಮಳಖೇಡ

ಮಳಖೇಡವು ಕರ್ನಾಟಕ ರಾಜ್ಯದ ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಒಂದು ಗ್ರಾಮ. ಇದು ಕಲ್ಬುರ್ಗಿಯಿಂದ ಸೇಡಂ ರಸ್ತೆಯಲ್ಲಿ ಸುಮಾರು ೪೦ಕಿ.ಮೀ. ದೂರದಲ್ಲಿದೆ; ಸೇಡಂ ಸ್ಟೇಷನ್ನಿನಿಂದ ಸುಮಾರು ೧೫ಕಿ.ಮೀ. ದೂರದಲ್ಲಿದೆ. 'ಮಾನ್ಯಖೇಟ' ಎಂಬುದು ಇದರ ಪ್ರಾಚೀನ ಹೆಸರು.

ಇದು ಸುಮಾರು ೨೨೫ ವರ್ಷಗಳ ಕಾಲ ಆಳಿದ ರಾಷ್ಟ್ರಕೂಟರಿಗೆ ಸೇರಿದ್ದ ಇತಿಹಾಸಪ್ರಸಿದ್ಧ ಸ್ಥಳ[೨]. ಪ್ರಸಿದ್ಧರಾಷ್ಟ್ರಕೂಟ ಅರಸ ಹಾಗೂ ಕನ್ನಡದ ಸುಪ್ರಸಿದ್ಧ ಕೃತಿ 'ಕವಿರಾಜಮಾರ್ಗ'ದ ಕರ್ತೃ ಅಮೋಘವರ್ಷ ನೃಪತುಂಗ(೮೧೪-೮೮೦ ಕ್ರಿ.ಶ.)ನ ಕಾಲದಲ್ಲಿ ನಿರ್ಮಾಣಗೊಂಡು ಅತ್ಯಂತ ಉಚ್ಛ್ರಾಯ ಕಂಡಿದ್ದ ಸ್ಥಳ. ಆ ಕಾಲದಲ್ಲಿ ಪೂರ್ವದಲ್ಲಿ ಸೇಡಂ ನವರೆಗೂ ಪಶ್ಚಿಮದಲ್ಲಿ ದಂಡೋತಿಯವರೆಗೂ ಎಂದರೆ ಒಟ್ಟು ೪೦ ಚದುರಮೈಲು ವಿಸ್ತೀರ್ಣದ ಸ್ಥಳವಾಗಿತ್ತು ಎಂದು ಉಲ್ಲೇಖವಿದೆ. ಅದರ ವೈಭವ ನೋಡಲು ಅರಬ್ ಮೊದಲಾದ ದೇಶಗಳ ಪ್ರವಾಸಿಗರು ಬರುತ್ತಿದ್ದರೆಂದೂ ಹೇಳುವುದುಂಟು.

**'ಕುಶರಾಯ ತಪಸು ಮಾಡಿದಂತ ವಸುಮತಿ'** (ಶ್ರೀವಿಜಯದಾಸರು) ಎಂಬುದು ಇದರ ಪೌರಾಣಿಕಮಹತ್ವ; ಕುಶ ಇಂದ್ರಾಂಶಸಂಭೂತ. ಆತನು ತಪಸ್ಸು ಮಾಡಿದ ಸ್ಥಳವೇ ಇಂದ್ರಾಂಶರಾದ ಶ್ರೀಜಯತೀರ್ಥರ ಕಾರ್ಯಕ್ಷೇತ್ರವಾದದ್ದು ಸುಸಂಗತವೂ ಆಗಿದೆ. ಇದಕ್ಕೆ

---

೧. ಶ್ರೀಜಯತೀರ್ಥರ ಗ್ರಂಥ ರಚನೆಯ ಸಾರ್ಥಕ್ಯವನ್ನು ಕಾವ್ಯಮಯವಾಗಿ ವರ್ಣಿಸುವ ಶ್ರೀವಾದಿರಾಜರ ಮಾತು ಹೀಗಿದೆ (ತೀರ್ಥಪ್ರಬಂಧ-ಪೂರ್ವಪ್ರಬಂಧ-ಶ್ಲೋ. ೧೮):

**ಮಾಧ್ವಗ್ರಂಥಾನ್ ಸ್ವಬಂಧೂನಿವ ಸರಸಹೃದಾಽಽಲಿಂಗ್ಯ ವಿಜ್ಞಾತಭಾವಃ**
**ಸಂಯೋಜ್ಯಾಲಂಕೃತಾಭಿಃ ಸ್ವಸಹಜಮತಿಸಂಭೂತವಾಗ್ಭಿರ್ವಧೂಭಿಃ।**
**ಕೃತ್ವಾ ನ್ಯೋಕ್ತೀಶ್ಚ ದಾಸೀರ್ಬುಧಹೃದಯಗೃಹಂ ಪ್ರೌಢವೃತ್ತೀಶ್ಚ ವೃತ್ತೀಃ**
**ದತ್ವಾ ನ್ಯೋನ್ಯಾಭಿಯೋಗಂ ಜಯಮುನಿರಸಕೃದ್ವೀಕ್ಷ್ಯ ರೇಮೇ ಕೃತಾರ್ಥಃ॥**

೨. ಕಾಗಿಣೀನದಿಗೆ ಹೊಂದಿಕೊಂಡಂತೆ ಇಂದಿಗೂ ಕಾಣಬರುವ ಮಳಖೇಡದ ತುಂಬ ವಿಶಾಲವಾದ ಕೋಟೆ ಇದರ ಐತಿಹಾಸಿಕಮಹತ್ತ್ವಕ್ಕೆ ದ್ಯೋತಕವಾಗಿದೆ.

ವೇದನಾಥಪುರ ಎಂಬ ಹೆಸರೂ ಇದ್ದ ಉಲ್ಲೇಖ ಜಯೀಂದ್ರೋದಯದಲ್ಲಿದೆ[೧]. ಮೇಘನಾಥಪುರ ಎಂದು ಶ್ರೀವಿಜಯದಾಸರ ಸುಳಾದಿಯಲ್ಲಿ ಪ್ರಸ್ತಾಪವಿದೆ. ಕಾಗಿನೀ ಮತ್ತು ಬೆಣ್ಣೆ ತೊರೆ ಎಂಬ ನದಿಗಳ ಸಂಗಮದ ಬಳಿಯಲ್ಲೇ ಇದು ಇದೆ.

ಇಂದು ಮಳಖೇಡದಲ್ಲಿ ಕೋಟೆಗೆ ಸಮೀಪವಿರುವ ಒಂದು ಓಣಿಯಲ್ಲಿ ಪ್ರಾಚೀನವಾದ ಸಂತಾನಗೋಪಾಲಕೃಷ್ಣಮಂದಿರವಿದೆ. ವಿಗ್ರಹ ಅತ್ಯಂತ ಸುಂದರವಾಗಿದೆ. ರಾಷ್ಟ್ರಕೂಟರ ಆರಾಧ್ಯದೈವವಾಗಿದ್ದಿತೆನ್ನಲಾಗುವ ಇದರ ಅರ್ಚಕರು ಗುರ್ಜಾಲಿ ಮನೆತನದವರು ಎಂದು ಪ್ರಸಿದ್ಧ. ಇವರಿಗೆ ವಾರಂಗಲ್ಲಿನ ಕಾಕತೀಯರಿಂದ ಅಗ್ರಹಾರ ದತ್ತಿ ಇದ್ದಿತು. ಸಂತಾನಗೋಪಾಲಕೃಷ್ಣಮಂದಿರದ ಸಮೀಪದಲ್ಲಿ [೨]ಮಲಯಾದ್ರಿಮಾಧವನ ಮಂದಿರವಿದೆ. ಅಲ್ಲಿಯ ಮಾಧವಮೂರ್ತಿಯೂ ಸಹ ಅತ್ಯಂತ ಸುಂದರವಾಗಿದ್ದು ಅದು ಅಲ್ಲಿಯ ಕ್ಷೇತ್ರಮೂರ್ತಿ ಎಂದೇ ಪ್ರಸಿದ್ಧ. ಇಲ್ಲಿ ಪ್ರಸನ್ನವೇಂಕಟೇಶದೇವರ ಗುಡಿಯೊಂದೂ ಸಹ ಇದೆ. ಅದರ ಬಳಿಯಲ್ಲಿಯೇ ಇರುವ ಮತ್ತೊಂದು ಪ್ರಾಚೀನದೇವಾಲಯ ಶಂಕರಲಿಂಗದೇವಾಲಯ. ಇಲ್ಲಿಯ ಶಿವಲಿಂಗದ ಮೇಲೆ ಪ್ರತಿದಿವಸ ಸೂರ್ಯನ ಪ್ರಥಮಕಿರಣ ಬೀಳುವುದು ಎಂದು ಪ್ರತೀತಿ. ಈ ಮಂದಿರದ ಒಳಮಗ್ಗಲ ಗೋಡೆಯ ಮೇಲೆ ನರಸಿಂಹಾವತಾರದ ಅಪೂರ್ವ ಕೆತ್ತನೆಗಳು ಕಂಡು ಬರುತ್ತವೆ. ಇದು ರುದ್ರದೇವರು ನರಸಿಂಹಾರಾಧಕರು ಎಂಬುದಕ್ಕೆ ಪೋಷಕ ಎನ್ನಬಹುದು. ದೆಹಲಿಯ ಸುಲ್ತಾನ ಔರಂಗಜೇಬನು ದಕ್ಷಿಣದ ಮೇಲೆ ದಂಡೆತ್ತಿ ಬಂದಾಗ ಈ ಕ್ಷೇತ್ರವನ್ನು ಸಂದರ್ಶಿಸಿ ಶ್ರೀಜಯತೀರ್ಥರ ಮಠಕ್ಕೆ (ಪ್ರತಿದಿವಸಕ್ಕೆ ಒಂದು ರೂಪಾಯಿಮೌಲ್ಯದ) 'ಯುಮಿಯಾ' ಎಂಬ ಒಂದು ನಾಣ್ಯದ ಉಂಬಳಿಯನ್ನು ಹಾಕಿಕೊಟ್ಟಿದ್ದನೆಂದು ಪ್ರತೀತಿ. ಶ್ರೀಅಕ್ಷೋಭ್ಯತೀರ್ಥರ ಕಾಲಕ್ಕೆ ವೈಷ್ಣವ ಕೇಂದ್ರವೆನ್ನಿಸಿದ ಇದು ಮುಂದೆ ಶ್ರೀಜಯತೀರ್ಥರ ಪ್ರಧಾನಕಾರ್ಯಕ್ಷೇತ್ರವೆನ್ನಿಸಿ ಮಾಧ್ವರ ಅಪೂರ್ವ ಗುರುಕ್ಷೇತ್ರವೆನ್ನಿಸಿತು.

ಕಾಗಿನೀನದಿಯ ತೀರದಲ್ಲಿ ಶ್ರೀಟೀಕಾಚಾರ್ಯರ ಮೂಲಬೃಂದಾವನವಿದೆ. ಮೊದಲು ಊರೊಳಗೆ ಕೋಟೆಯ ಆವರಣದಲ್ಲಿದ್ದಿತೆಂದು ಹೇಳಲಾಗುವ ಶ್ರೀಅಕ್ಷೋಭ್ಯತೀರ್ಥರ ಮೂಲಬೃಂದಾವನ ಈಗ ಶ್ರೀಟೀಕಾರಾಯರ ಬೃಂದಾವನದ ಬಲಬದಿಯಲ್ಲಿದೆ; ಎಡಬದಿಯಲ್ಲಿ ಉತ್ತರಾದಿಮಠದ ಶ್ರೀರಘುನಾಥತೀರ್ಥರ ಮೂಲ ಬೃಂದಾವನವೂ, ಹೊರಗಿನ ಆವರಣದಲ್ಲಿ ಶ್ರೀವ್ಯಾಸತೀರ್ಥರು ಮೊದಲಾದವರ ಬೃಂದಾವನಗಳೂ ಇವೆ. ಶ್ರೀರಾಘವೇಂದ್ರಸ್ವಾಮಿಗಳು ಮೊದಲಾದ ಅನೇಕ ಮಹನೀಯರೂ ಒಂದಂಶದಿಂದ ಶ್ರೀಟೀಕಾರಾಯರ ಬದಿಯಲ್ಲಿ ಸೇವೆಗೆಂದು ನೆಲೆಸಿದ್ದಾರೆ ಎಂಬುದು ಇದರ ಮತ್ತೊಂದು ವೈಶಿಷ್ಟ್ಯ.

---

೧. ವೇದನಾಥಪುರಮಿತ್ಯನುತ್ತಮಂ ಭೂಮಿಮಂಡಲವಿಭೂಷಣಂ ಪರಮ್ ।
ಕಾಗಿನೀವರನದೀಜಲೇ ಹ್ಯಭ್ರೂದ್ದರ್ಶನಂ ವಿದಧತೀವ ಸಂಪದಃ ॥ – ಜಯೀಂದ್ರೋದಯ (೩/೧)

೨. ಈ ಮಲಯಾದ್ರಿಮಾಧವಮಂದಿರದಲ್ಲಿ ಒಂದು ಅತ್ಯಂತ ಅಪೂರ್ವವಾದ ಕೇಶವದೇವರ ವಿಗ್ರಹವೂ ಸಹ ಕಂಡುಬರುವುದು.

## ೨. ಕಾಗಿನೀ(ಕಾಗಿನಾ)ನದಿ

ಆಂಧ್ರಪ್ರದೇಶದ 'ಕೋಹಿರ್' ಎಂಬಲ್ಲಿ ಹುಟ್ಟುವ ಈ ನದಿ ಸರ್ಪಾಕಾರ ವಾಗಿ 'ಮಳಖೇಡ' ಮೊದಲಾದವುಗಳ ಮಾರ್ಗವಾಗಿ ಹರಿಮು ಕೊನೆಗೆ ಚಿತ್ತಾಪುರ ತಾಲೂಕಿನ ಹುನಗುಂಟ ಗ್ರಾಮದ ಬಳಿ ಭೀಮಾನದಿಯನ್ನು ಸೇರುತ್ತದೆ. ಕಮಲಾವತಿ, ಮುಲ್ಲಾಮಾರಿ ಮತ್ತು ಬೆಣ್ಣೊರೆ ಎಂಬ ಮೂರು ಇವರ ಜೊತೆಯ ಉಪನದಿಗಳು. ಅಗಸ್ತ್ಯರು, ಒಮ್ಮೆ ಕಲಿಯುಗದಲ್ಲಿ ತೀರ್ಥಗಳ ಸನ್ನಿಧಾನ ಕಡಿಮೆಯಾಗುತ್ತದೆಂದು ತಿಳಿದು, ಭರತಖಂಡದ ಎಲ್ಲಾ ಮುಖ್ಯ ನದಿಗಳ ಸನ್ನಿಧಾನವನ್ನೂ ತಮ್ಮ ಕಮಂಡಲುವಿನಲ್ಲಿ ಸಂಗ್ರಹಿಸಿಕೊಂಡು ಹೊರಟಿದ್ದಾಗ ಇಂದ್ರದೇವರು ಕಾಗೆಯ ರೂಪದಲ್ಲಿ ಬಂದು ಅದನ್ನು ಉರುಳಿಸಿಬಿಟ್ಟರಂತೆ; ಹಾಗೆ ಕಾಗೆ ರೂಪದ ಇಂದ್ರದೇವರಿಂದ ಹರಿದಿದ್ದರಿಂದಲೇ ಇದಕ್ಕೆ 'ಕಾಗಿನೀ' ಎಂದು ಪ್ರಸಿದ್ಧಿ. ಇದರ ತೀರದಲ್ಲಿ ಮಳಖೇಡದಲ್ಲಿ ತಪಸ್ಸು ಮಾಡಿ ಸಿದ್ಧಿ ಪಡೆದ ಶ್ರೀರಾಮಪುತ್ರಕುಶರಾಯನೂ ಇಂದ್ರಾಂಶನೇ; ಟೀಕೆಬರೆದ ಶ್ರೀ ಜಯತೀರ್ಥರೂ ಇಂದ್ರಾಂಶರೆಂದೇ ಪ್ರಸಿದ್ಧರು; ಮಳಖೇಡ ಎಂಬಲ್ಲಿನ 'ಮಳೆ'ಯ ಅಧಿದೇವತೆ ಇಂದ್ರ ಎಂಬುದೂ ಗಮನಾರ್ಹ.

'ನಾಕಿನೀ ಕಾಗಿನೀ ಭೂತ್ವಾ ಪಾಕಶಾಸನಮನ್ವಗಾತ್ ।
ಏತದ್ಯೋಗ್ಯಂ ಸರ್ವಜನಾನ್ ನೇತುಂ ವೈಕುಂಠಮಂದಿರಮ್ ॥'

– ಎಂಬ ಮಾತೊಂದು ಪ್ರಸಿದ್ಧಿಯಲ್ಲಿ ಬಂದಿದೆ.

## ೩. ಯರಗೋಳ

ಶ್ರೀಜಯತೀರ್ಥರು ನ್ಯಾಯಸುಧಾದಿ ಗ್ರಂಥಗಳನ್ನು ರಚಿಸಿದ ಸ್ಥಳವೆಂದು ಪ್ರಸಿದ್ಧವಾಗಿರುವ ಪುಣ್ಯಕ್ಷೇತ್ರ 'ಯರಗೋಳ'ವು ಗುಲ್ಬರ್ಗ ಜಿಲ್ಲೆಯ ಚಿತ್ತಾಪುರಕ್ಕೆ ಹತ್ತಿರದಲ್ಲಿರುವ ಒಂದು ಗ್ರಾಮ. ಊರಿನಿಂದ ಸುಮಾರು ಒಂದು ಕಿ.ಮೀ. ದೂರದಲ್ಲಿನ ಒಂದು ಚಿಕ್ಕ ಬೆಟ್ಟದಲ್ಲಿ ಇವರು ಗ್ರಂಥರಚನೆ ಮಾಡಿದ ಗುಹೆ ಇದೆ. ಅಲ್ಲಿಗೆ ಸ್ವಲ್ಪ ದೂರದಲ್ಲಿ ಅವರು ಒಂದು ಹಿಡಿಮಣ್ಣು ಹಾಕಿ ನೀರನ್ನು ನಿಲ್ಲಿಸಿದ್ದರೆಂದು ಹೇಳಲಾಗುವ ಕೆರೆ ಇದೆ; ಅದರ ತೀರದಲ್ಲಿ ಶ್ರೀರಾಮಚಂದ್ರತೀರ್ಥರು ಮತ್ತು ಶ್ರೀವಿದ್ಯಾನಿಧಿತೀರ್ಥರ ಬೃಂದಾವನಗಳಿವೆ. ಯರಗೋಳದ ಗುಹೆ, ಕೆರೆ, ಮೊದಲಾದವುಗಳ ವಾತಾವರಣ ಇಂದಿಗೂ ಮನೋಹರವೂ, ಪ್ರಶಾಂತವೂ ಆಗಿದೆ. ಶಂಖಋಷಿಗಳಿಂದ ಹರಿತತ್ತ್ವ ಕೇಳಿ ವ್ಯಾಧನೊಬ್ಬ ಸದ್ಗತಿ ಪಡೆದ ಸ್ಕಂದಪುರಾಣೋಕ್ತ ವೈಷ್ಣವಸ್ಥಳ ಎಂಬುದು ಇದರ [೧]ಪೌರಾಣಿಕ ಮಹತ್ತ್ವ.

---

೧. ಅಥ ಯರಗೋಳಂ ಪ್ರಾಗಾತ್ ಪೂರ್ವಂ ಶಂಖರ್ಷಿಣೋಕ್ತಂ ಹರಿತತ್ತ್ವಮ್ ।
ಯತ್ರ ಶ್ರುತ್ವಾ ವ್ಯಾಧಃ ಶ್ರೀಹರಿಮಗಾದಿತಿ ಸ್ಮೃತಂ ಸ್ಕಾಂದೇ ॥
–ರಘುದಾಂತತೀರ್ಥಕೃತ ಶ್ರೀ ಜಯತೀರ್ಥವಿಜಯ,೪೨

## ೪. ಮಂಗಳವೇಢೆ ಇತ್ಯಾದಿ

ಇವುಗಳಲ್ಲದೆ ಅವರ ತಾಯಿಯ ತವರುಮನೆಯಾದ 'ಮಂಗಳವೇಢೆ'ಯು ಪಂಢರ-ಪುರದಿಂದ ೧೫ ಮೈಲು ದೂರದಲ್ಲಿದೆ. ಅವರು ತಪಸ್ಸು ಮಾಡಿದ ಸ್ಥಳವೆಂದು ಪ್ರಸಿದ್ಧವಿರುವ 'ಸಂಧ್ಯಾವಳಿ'ಯು ಪಂಢರಪುರದಿಂದ ೫ ಮೈಲಿ ದೂರದಲ್ಲೂ, ಅವರಿಗೆ ಶ್ರೀದುರ್ಗಾದೇವಿ ಅನುಗ್ರಹಿಸಿದ ಸ್ಥಳವೆಂದು ಪ್ರಸಿದ್ಧವಾಗಿರುವ ದುರ್ಗಾಬೆಟ್ಟವು ಮಳಖೇಡದಿಂದ ೫ ಮೈಲು ದೂರದಲ್ಲೂ ಇವೆ. ಮಂಗಳವೇಢೆಯ ಮನೆಯಲ್ಲಿ ಅವರು ಪೂಜಿಸಿದ್ದರೆನ್ನಲಾದ ದೇವರ ಪ್ರತಿಮೆಗಳಿವೆ. ಸಂಧ್ಯಾವಳಿಯಲ್ಲಿ ಸರಸ್ವತೀ ದೇವಾಲಯವೂ, ದುರ್ಗಾಬೆಟ್ಟದಲ್ಲಿ ದುರ್ಗಾ ದೇವಾಲಯವೂ ಇವೆ.

## ಶ್ರೀ ಜಯತೀರ್ಥರ ಮಹತ್ತ್ವ

ತತ್ತ್ವಚಿಂತನೆಯೇ ಒಂದು ಕುರುಕ್ಷೇತ್ರ; ಸನ್ಮತ(ಸಿದ್ಧಾಂತ)ದುರ್ಮತ(ಪೂರ್ವಪಕ್ಷ)-ಗಳೇ ಈ ಕುರುಕ್ಷೇತ್ರದ ಪಾಂಡವಕೌರವರು; ಭಗವಂತನ ಸರ್ವೋತ್ತಮತ್ವ ಸ್ವಾತಂತ್ರ್ಯಗಳು, ಜಗತ್ತಿನ ಅಸ್ವಾತಂತ್ರ್ಯ, ಭಗವದನುಗ್ರಹಕ್ಕೆ ಕೃಷ್ಣಾರ್ಪಣಪೂರ್ವಕ ನಿಷ್ಕಾಮ ಕರ್ಮಾನುಷ್ಠಾನ-ರೂಪ 'ಧರ್ಮ'ದ ಅನಿವಾರ್ಯತೆ ಇವುಗಳ ಸಾಧನೆಯೇ ಈ ಉಭಯ ಕುರುಕ್ಷೇತ್ರಗಳ ಮುಖ್ಯ ಗುರಿ. ಕುರುಕ್ಷೇತ್ರದ ಸೂತ್ರಧಾರ ಸಾಕ್ಷಾತ್ ಶ್ರೀಕೃಷ್ಣ, ಅದರಂತೆ ಈ ವೇದಾಂತ(ಬ್ರಹ್ಮ) ಸೂತ್ರಧಾರ ಶ್ರೀಕೃಷ್ಣನ ರೂಪಾಂತರವೇ ಆದ ಶ್ರೀವೇದವ್ಯಾಸರು (ವಾಸಿಷ್ಠ ಕೃಷ್ಣ); ಅಲ್ಲಿ ಶ್ರೀಕೃಷ್ಣ ಪಾಂಡವರ ಪಕ್ಷದಲ್ಲಿದ್ದಂತೆ ಇಲ್ಲಿಯ ವೇದವ್ಯಾಸರು ಸಿದ್ಧಾಂತಪಕ್ಷದಲ್ಲಿದ್ದಾರೆ; ಶ್ರೀಕೃಷ್ಣನ ನೇತೃತ್ವದಲ್ಲಿ ಪ್ರತಿಪಕ್ಷದ ಎಲ್ಲ ಕೌರವರನ್ನೂ, ಬಹುಭಾಗ ಸೈನ್ಯವನ್ನೂ, ನಾಶಪಡಿಸಿದ ಭೀಮಸೇನನೇ ಶ್ರೀವೇದವ್ಯಾಸರ ಬ್ರಹ್ಮಸೂತ್ರಗಳಿಗೆ ನಿರ್ದುಷ್ಟಭಾಷ್ಯ ರಚಿಸುವ ಮೂಲಕ ದುರ್ಮತಗಳನ್ನು ಖಂಡಿಸಿ ಸತ್ಸಿದ್ಧಾಂತವನ್ನು ಪ್ರಚುರಪಡಿಸಿದ ಆಚಾರ್ಯ ಶ್ರೀಮಧ್ವರು; ಭೀಮಸೇನನ ಅನಂತರದ ಮುಖ್ಯಸ್ಥಾನ **'ಪಾರ್ಥ ಏವ ಧನುರ್ಧರಃ'** ಎಂದು ಪ್ರಖ್ಯಾತ-ನಾದ ಅರ್ಜುನನದು; ವೇದಾಂತ ಪ್ರಪಂಚದಲ್ಲಿ ಶ್ರೀಮಧ್ವಾಚಾರ್ಯರ ಅನಂತರ, 'ಸರ್ವಮಾನ್ಯಟೀಕಾಕಾರ'ರೆಂದು ಮಾನಿತರಾಗಿರುವ ಶ್ರೀಜಯತೀರ್ಥರದೇ ಅಗ್ರಸ್ಥಾನ; ಅರ್ಜುನನು ಭೀಮರಕ್ಷಿತನೂ, ಕಪಿಧ್ವಜನೂ ಆಗಿ ಜಯಶೀಲನಾದಂತೆ, ಶ್ರೀಜಯತೀರ್ಥರು ಮಧ್ವರಕ್ಷಿತರೂ, ವೈಷ್ಣವಸಿದ್ಧಾಂತಧ್ವಜರೂ ಆಗಿ ಅಜಯ್ಯರಾಗಿದ್ದಾರೆ. ಶ್ರೀಜಯತೀರ್ಥರ ವಾಕ್‌ಶರಗಳಿಗೆ ಬಲಿಯಾಗದ ಪ್ರತಿಪಕ್ಷಿಯೇ ಇಲ್ಲವೆಂಬುದಕ್ಕೆ ಈವರೆಗಿನ ದ್ವೈತವೇದಾಂತದ ಇತಿಹಾಸವೇ ಸಾಕ್ಷಿ.

ಭೀಮಾನದಿಯಲ್ಲಿ ಅಶ್ವಾರೂಢರಾಗಿಯೇ ನುಗ್ಗಿ ಪ್ರವಾಹಕ್ಕೆ ಬಾಯಿ ಹಚ್ಚಿ ನೀರನ್ನು ಕುಡಿಯುವ ಇವರ ಆಶ್ರಮ ಪೂರ್ವಪ್ರವೃತ್ತಿಯು ಆಶ್ರಮೋತ್ತರದಲ್ಲಿ ಅನುವ್ಯಾಖ್ಯಾನಾದಿ ಸಚ್ಛಾಸ್ತ್ರಕಮಲಗತಮಧುಮಯ ಪ್ರವಾಹಕ್ಕೆ ತಮ್ಮ ಮನೋಭ್ರಮರದ ಮುಖವನ್ನು ಹಚ್ಚಿ ಆಸ್ವಾದಿಸುವ 'ಮಧುಕರವೃತ್ತಿ'ಯಾಗಿ ಮುಂದುವರೆಯಿತು:

**ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ – ನ್ಯಾಯಸುಧಾ**

ಹೀಗೆ ಸಂಗ್ರಹಿಸಿದ ಜ್ಞಾನಮಧುವಿನ ಕೆಲ ಭಾಗವನ್ನು ತಮ್ಮ ಗ್ರಂಥರೂಪ ಸುವರ್ಣ-ಪಾತ್ರೆಯಲ್ಲಿ ಯೋಗ್ಯರಿಗಾಗಿ ಸಂಚಯಿಸಿಡುವ ಮೂಲಕ ಇವರು ಮಾಡಿರುವ ಉಪಕಾರ ಅತ್ಯಮೋಘವಾದುದು.

'ವೈಷ್ಣವವೇದಾಂತಪರಂಪರೆಯಲ್ಲಿ ಆಚಾರ್ಯ ಶ್ರೀಮಧ್ವರ ಅನಂತರ ತಮ್ಮ ಅಸಾಧಾರಣವಾಙ್ಮಯ ತಪಸ್ಸಿನಿಂದ ಮಾನ್ಯರಾಗಿರುವ ರಸಋಷಿಗಳಲ್ಲಿ ಶ್ರೀ ಜಯತೀರ್ಥರದೇ ಅಗ್ರಸ್ಥಾನ. ಇಡೀ ಪರಂಪರೆಯೇ 'ಟೀಕಾಕಾರ'ರೆಂದು ಮುಕ್ತಕಂಠವಾಗಿ ಗೌರವಿಸುವ ಇಂತಹ ಸರ್ವಮಾನ್ಯ ಟೀಕಾಕಾರರು ಜಗತ್ತಿನ ಬೇರಾವ ತತ್ತ್ವಚಿಂತನ ಪ್ರಣಾಳಿಗೂ ದೊರೆಯುವುದಿಲ್ಲ. ಸಂಸ್ಕೃತ ಭಾಷೆಯನ್ನು ಟೀಕಾರಚನೆಯ ಮಾಧ್ಯಮವನ್ನಾಗಿ ಇವರಷ್ಟು ಸಮರ್ಥವಾಗಿ ಬಳಸಿಕೊಂಡಿರುವ ಗ್ರಂಥಕಾರರ ಸಂಖ್ಯೆ ತುಂಬಾ ವಿರಳ. ಪ್ರತಿ ಹಂತದಲ್ಲೂ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನೂ ಸ್ಫುಟವಾಗಿ ವಿಶ್ಲೇಷಿಸಿ ತತ್ತ್ವಶಾಸ್ತ್ರದ ಮೂಲಭೂತತತ್ತ್ವಗಳ ಮೇಲೆ ಬೆಳಕು ಚೆಲ್ಲುವ ಇವರ ಚಿಂತನ ಶೈಲಿ ತುಂಬಾ ಅಪೂರ್ವ. ಮೂಲಕಾರರ ಆಶಯವನ್ನು ಹತ್ತಾರು ಬಗೆಯಲ್ಲಿ ವೈಶಿಷ್ಟ್ಯ ಪೂರ್ಣವಾಗಿ ಪ್ರಕಟಿಸುವ ಇವರ ವ್ಯಾಖ್ಯಾನ ಕೌಶಲ (ಉದಾ: **ಪ್ರತ್ಯಕ್ಷವತ್ತ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ । ... ಗೌರವಂ ಕಲ್ಪನೇಽನ್ಯಥಾ – ಅ.ವ್ಯಾ. ಅನ್ಯಥಾ ಅನವಸ್ಥಾನಾತ್ ತತ್ತ್ವನಿರ್ಣಯಃ – ಇತ್ಯಾದಿ**) ಅನನ್ಯಸಾಧಾರಣ. ಅನ್ಯಮತೀಯರ ವಾದಗಳನ್ನು '**ಏಕೇ**', '**ಅನ್ಯೇ**', '**ಅಪರೇ**', '**ಕೇಚಿತ್**' ಇತ್ಯಾದಿಯಾಗಿ ಪ್ರಾಮಾಣಿಕವಾಗಿ ವ್ಯವಸ್ಥಿತವಾಗಿ ಅನುವಾದ ಮಾಡುವ ಇವರ ಸಕಲದರ್ಶನಗಳ ಪ್ರಾವೀಣ್ಯ ಅತ್ಯಾಶ್ಚರ್ಯಕರ. ಅದ್ಭುತ ಸಂಗ್ರಹಣಕೌಶಲ, ನಿರೂಪಣೆಯಲ್ಲಿ ತೋರುವ ಖಚಿತತೆ, ವಿಮರ್ಶೆಯಲ್ಲಿ ಕಂಡುಬರುವ ಸಂಯಮ, ಸಮಸ್ಯೆಗಳನ್ನು ಸಮಗ್ರವಾಗಿ ವಿವೇಚಿಸುವ ಪೂರ್ಣದೃಷ್ಟಿ '**ಅಯಂಭಾವಃ**', '**ಅಯಮಭಿಪ್ರಾಯಃ**', '**ಇದಮತ್ರಾಕೂತಮ್**', '**ಅತ್ರೈಷಾ ಪ್ರಕ್ರಿಯಾ**', '**ಇಯಮತ್ರದರ್ಶನಪದ್ಧತಿಃ**' ಇತ್ಯಾದಿಯಾಗಿ ಮೂಲಕಾರರ ಆಶಯಗಳನ್ನು ಸಂಗ್ರಹಿಸಿ ಕೊಡುವ ನಿರೂಪಣೆಯ ಸೊಗಸು, ಲಲಿತವೂ ಸುಂದರವೂ ಆದ ಶೈಲಿ, ಪ್ರಮಾಣಗಳ ಹಿನ್ನಲೆಯಲ್ಲಿ ತತ್ತ್ವವನ್ನು ವಿವೇಚಿಸುವ ವಸ್ತುನಿಷ್ಠತೆ, ಮೊದಲಾದ ಅನೇಕ ಕಾರಣಗಳಿಂದಾಗಿ ಇವರ ರಚನೆಗಳಿಗೆ ವೇದಾಂತಪ್ರಪಂಚದಲ್ಲಿ ಸಾರ್ವಕಾಲಿಕ ಮಹತ್ತ್ವ ಉಂಟು.

ಅನಂತರದ ದ್ವೈತವಾಙ್ಮಯದ ಬಹುಭಾಗ ಒಂದಲ್ಲ ಒಂದು ರೀತಿಯಲ್ಲಿ ಶ್ರೀಜಯತೀರ್ಥರ ಗ್ರಂಥಗಳ ವಿವರಣರೂಪವೇ ಆಗಿದೆ ಎಂಬುದನ್ನು ಗಮನಿಸಿದರೆ ಇವರ ಗ್ರಂಥಗಳ ಮೌಲ್ಯ ಮನವರಿಕೆಯಾಗುತ್ತದೆ. ಜಗತ್ತಿನ ಬೇರಾವುದೇ ಪಂಥದ ಟೀಕಾಕಾರರ ಕೃತಿಗಳಿಗೂ ಇವರ ಗ್ರಂಥಗಳಿಗೆ ರಚಿತವಾಗಿರುವಷ್ಟು ಅಧಿಕ ಸಂಖ್ಯೆಯಲ್ಲಿ ಟಿಪ್ಪಣಿಗಳು ಬರೆಯಲ್ಪಟ್ಟಿಲ್ಲ ಎಂಬುದು ತುಂಬಾ ಗಮನಾರ್ಹ. ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಘೂತ್ತಮರು, ಶ್ರೀರಾಘವೇಂದ್ರರು ಮೊದಲಾದ ಅನಂತರದ ವಿದ್ವದ್ವಿಭೂತಿಗಳೆಲ್ಲರೂ

ಶ್ರೀಜಯತೀರ್ಥರ ಗ್ರಂಥಗಳ ಆಶಯಗಳ ಅಭಿವ್ಯಕ್ತಿಯನ್ನೇ ತಮ್ಮ ಜೀವನದ ಮಹಾಸಿದ್ಧಿಯನ್ನಾಗಿ ಕಂಡು ತಮ್ಮ ಕೃತಿಗಳನ್ನು ರಚಿಸಿದ್ದಾರೆ ಎಂಬುದು ಇವರ ವಾಙ್ಮಯತಪಸ್ಸಿನ ಮಹತ್ತ್ವವನ್ನು ನಿರೂಪಿಸುತ್ತದೆ.

ಸೂತ್ರ(ಮೂಲ)ಕಾರರ ನಿಲುವನ್ನು ಸ್ಪಷ್ಟಪಡಿಸುವುದು ಭಾಷ್ಯಕಾರರ ಕರ್ತವ್ಯ; ಭಾಷ್ಯಕಾರರ ಆಶಯವನ್ನು ಸ್ಪಷ್ಟಪಡಿಸುತ್ತಲೇ ಸೂತ್ರಕಾರರ ನಿಲುವನ್ನು ವಿವರಿಸುವುದು ಟೀಕಾಕಾರರ ಕಾರ್ಯ; ಮಧ್ವಭಾಷ್ಯದ ಪ್ರಥಮ ಟೀಕಾಕಾರರೆಂದು ಮಾನ್ಯರಾಗಿರುವ ಶ್ರೀಪದ್ಮನಾಭತೀರ್ಥರು, ಶ್ರೀಮಧ್ವಾಚಾರ್ಯರ ಅಪ್ಪಣೆಯಿಂದಲೇ 'ತತ್ತ್ವಪ್ರದೀಪ' ಎಂಬ ಟೀಕೆಯನ್ನು ರಚಿಸಿದ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ಮೊದಲಾದ ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು ಈ ರೀತಿಯ ಟೀಕಾರಚನೆಯನ್ನು ಮಾಡಿ 'ಪ್ರಾಚೀನಟೀಕಾಕಾರ'ರೆಂದು ಪ್ರಸಿದ್ಧರಾಗಿದ್ದಾರೆ. ಆಚಾರ್ಯ ಶ್ರೀಮಧ್ವರ 'ಅನುಭಾಷ್ಯ (ಅನುವ್ಯಾಖ್ಯಾನ)' ಒಂದರ್ಥದಲ್ಲಿ ಟೀಕಾಗ್ರಂಥದ ಸ್ವರೂಪವನ್ನು ಖಚಿತವಾಗಿ ನಿರ್ದೇಶಿಸುವ ಅಸಾಧಾರಣಕೃತಿಯಾಗಿದೆ (**ಸ್ವಯಂಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ - ಅನುವ್ಯಾಖ್ಯಾನ**). ಶ್ರೀಮಧ್ವಾಚಾರ್ಯರ ಸಾಕ್ಷಾತ್ಪ್ರಭಾವಕ್ಕೊಳಪಟ್ಟ ಆ ಕಾಲದ ಜಿಜ್ಞಾಸುಗಳಿಗೆ ವಿಶೇಷ ಉಪಕಾರಕವಾದ 'ಪ್ರಾಚೀನ ಟೀಕೆ'ಗಳು, ಗಾತ್ರದಲ್ಲಿ ಸ್ವಲ್ಪ ಸಂಗ್ರಹರೂಪವಾಗಿರುವುದು ಅವುಗಳಿಗೆ ಭೂಷಣವೇ ಆಗಿದೆ. ಆದರೆ ಶ್ರೀಅಕ್ಷೋಭ್ಯತೀರ್ಥರೊಂದಿಗೆ ಭಾಷ್ಯಕಾರರ ಸಾಕ್ಷಾತ್ ಶಿಷ್ಯಪರಂಪರೆ ಕಣ್ಮರೆಯಾಗುತ್ತಿದ್ದಂತೆಯೇ ಬಂದ ಶ್ರೀಜಯತೀರ್ಥರು, ಅನಂತರದ ಜಿಜ್ಞಾಸುವೃಂದಕ್ಕೆ ಭಾಷ್ಯಕಾರರ ಗ್ರಂಥಗಳ ಸಂಪ್ರದಾಯಪ್ರಾಪ್ತ ಅರ್ಥವಿಶೇಷಗಳನ್ನೆಲ್ಲ ಗುರೂಪದಿಷ್ಟ ಮಾರ್ಗದಲ್ಲಿ ಒದಗಿಸಿ ಕೊಡುವ '**ಜ್ಞಾನಸೇತು**'ವಾಗಿ ಮಾಡಿರುವ ಉಪಕಾರ ಅಪಾರವಾದುದು; ಅವರ ಗ್ರಂಥಗಳು ಅರ್ಥತಃ ಮಾತ್ರವಲ್ಲದೆ ಶಬ್ದತಃ ಕೂಡ ಗುರುಪರಂಪರಾಪ್ರಾಪ್ತವೇ ಆಗಿವೆ ಎನ್ನಲು,

**ಅಕ್ಷೋಭ್ಯತೀರ್ಥಗುರುಣಾ ಶುಕವಚ್ಛಿಕ್ಷಿತಸ್ಯ ಮೇ ।**
**ವಚೋಭಿರಮೃತಪ್ರಾಯೈಃ ಪ್ರೀಯಂತಾಂ ಸತತಂ ಬುಧಾಃ । – ಪ್ರಮೇಯದೀಪಿಕಾ**

— ಎಂಬ ಅವರ ಮಾತಿನಲ್ಲಿಯ ಧ್ವನಿ ಪ್ರಮಾಣವಾಗಿದೆ.

ಪುಷ್ಪಗತಮಧುವನ್ನು ಆಸ್ವಾದಿಸುವ ಸಾಮರ್ಥ್ಯವು ಭ್ರಮರಗಳಿಗೆ ಮಾತ್ರವೇ ಇರುವಂತೆ ಶ್ರೀಮಧ್ವಾಚಾರ್ಯರ ಅಗಾಧ ಗ್ರಂಥಗಳ ಭಾವವನ್ನು ಗ್ರಹಿಸುವ ಸಾಮರ್ಥ್ಯವು ಸಹ ಅವರ ವಿಶಿಷ್ಟಕೃಪಾಭಾಜನರಾದ ಉತ್ತಮಾಧಿಕಾರಿಗಳಿಗೆ ಮಾತ್ರವೇ ಸಾಧ್ಯ :

**ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್ ।**
**ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ॥ – ಅನುವ್ಯಾಖ್ಯಾನ ೧/೧/೨**

**ಏವಂ ಸುದುರ್ಲಭೇಽಪ್ಯದ್ಧಾ ಮಹಾನ್ಯಾಯಪರಾಮೃತೇ ।**
**ಕೇಚನಾಧಿಕ್ರಿಯಂತೇ ಚ ತತ್ಪ್ರಸಾದಾನುರಂಜಿತಾಃ ॥– ನ್ಯಾಯವಿವರಣ**

ಹೀಗೆ ಶ್ರೀಮಧ್ವಾಚಾರ್ಯರ ಗ್ರಂಥಗಳ ಭಾವಮಧುವನ್ನು ಗ್ರಹಿಸುವ ಅಂತಹ ಉತ್ಕೃಷ್ಟ ಭ್ರಮರರೆಂದು ಮಾನ್ಯರಾಗಿರುವ ಮಹನೀಯರಲ್ಲಿ ಶ್ರೀಜಯತೀರ್ಥರು ಅಗ್ರಮಾನ್ಯರಾಗಿದ್ದಾರೆ. ಟೀಕಾರಚನೆಗೆ ಅವಶ್ಯವಾದ ಅರ್ಹತೆಗಳಲ್ಲಿ ತುಂಬಾ ಮುಖ್ಯವಾದ ಭಾಷ್ಯಕಾರರ ಪರಮಾನು-ಗ್ರಹ ಇವರಲ್ಲಿ ಪೂರ್ಣವಾಗಿತ್ತು :

**ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ ಪ್ರಪನ್ನಾ**
**ಮಾನ್ಯಾ ಸ್ಮಃ ಕಿಮಪಿ ಚ ವದಂತೋಽಪಿ ಮಹತಾಮ್ ।** – ನ್ಯಾಯಸುಧಾ

ಟೀಕಾರಚನೆ ಇವರ ಜೀವನದ ಮಹಾವ್ರತವೂ ಆಗಿತ್ತು :

**... ಪರಂ ಶ್ರದ್ಧಾಜಾಡ್ಯಾದಕೃಷಿ ಕೃತಿರಾಚಾರ್ಯವಚಸಿ ..... ।** - ನ್ಯಾಯಸುಧಾ

ಶ್ರೀಮದಾಚಾರ್ಯರ ಭಾವವನ್ನು ಜಿಜ್ಞಾಸುಗಳಿಗೆ ಸುಲಭಗ್ರಾಹ್ಯವನ್ನಾಗಿಸಲು, ಪ್ರಸಂಗಾಂ-ತರದಲ್ಲಿ (ನ್ಯಾಯಸುಧಾ ೧/೧/೧) ತಾವೇ ತಿಳಿಸಿರುವ ಅನೇಕವಿಧ ಸ್ಪಷ್ಟೀಕರಣವನ್ನು ಅವಶ್ಯವಿದ್ದೆಡೆಗಳಲ್ಲೆಲ್ಲಾ ಕೊಟ್ಟಿರುವುದು ಶ್ರೀಜಯತೀರ್ಥರ ಟೀಕೆಗಳ ವೈಶಿಷ್ಟ್ಯ :

**ಸ್ಪಷ್ಟೀಕರಣಂ ಚಾನೇಕವಿಧಮ್ । ಕ್ವಚಿತ್ ಅನುಕ್ತಾಂಶಸ್ಯ ಉಕ್ತಿಃ । ಕ್ವಾಪಿ ಅತಿಸಂಕ್ಷಿಪ್ತಸ್ಯ ವಿಸ್ತರಣಮ್ । ಕ್ವಚಿತ್ ಅತಿವಿಸ್ತೃತತಯಾ ವಿಕ್ಷಿಪ್ತಸ್ಯ ಏಕೀಕರಣಮ್। ಕುತ್ರಾಪ್ಯುಕ್ತಸ್ಯ ಉಪಪಾ-ದನಮ್ । ಕ್ವಚಿದಪವ್ಯಾಖ್ಯಾನನಿರಾಕರಣೇನ ದೃಢೀಕರಣಮ್ । ಇತ್ಯಾದಿ ।** –ನ್ಯಾಯಸುಧಾ

ಲಲಿತಶೈಲಿ, ಸರಳಭಾಷೆ, ಪ್ರೌಢಚಿಂತನೆ, ನೇರನಿರೂಪಣೆ, ಸ್ಪಷ್ಟವಿಶ್ಲೇಷಣೆ, ಉತ್ತಮ-ಸಂಗ್ರಹಣ, ಪರಿಶುದ್ಧವಿವೇಚನೆ, ಸಂತತ ಪ್ರಮಾಣೋದಾಹರಣೆ, ಸಮತೂಕದ ವಿಮರ್ಶೆ, ಔಚಿತ್ಯಮೀರದ ಖಂಡನೆ, ಸುಂದರ ಪ್ರತಿಪಾದನೆ, ಅಸಂಗತ್ಯಾದಿ ದೋಷರಾಹಿತ್ಯ ಮೊದಲಾ-ದವು ಇವರ ಕೃತಿಗಳ ವಿಶಿಷ್ಟ ಲಕ್ಷಣಗಳು. ತತ್ತ್ವಜ್ಞಾನದಂತಹ ಕ್ಲಿಷ್ಟವಿಷಯವನ್ನೂ ಗದ್ಯಕಾವ್ಯ-ದಂತಹ ರಮಣೀಯಶೈಲಿಯಲ್ಲಿ ನಿರೂಪಿಸಿರುವುದು ಇವರ ಹಿರಿಮೆ. ಇವರ ಕೃತಿಗಳ ಆದ್ಯಂತ ಶ್ಲೋಕಗಳಂತೂ ಪ್ರಥಮ ಶ್ರೇಣಿಯ ಕಾವ್ಯಗಳೇ ಆಗಿವೆ. ಶಾಸ್ತ್ರಗ್ರಂಥವಿಧುರವಾದ ಒಂದು ಉಕ್ತಿಯೂ ಇವರ ಕೃತಿಗಳಲ್ಲಿ ದೊರೆಯುವುದಿಲ್ಲ. ಅನಂತರ ಬಂದ [೧]ಯಾರೂ ಇವರು ಟೀಕೆ

---

೧. ಶ್ರೀ ಜಯತೀರ್ಥರ ವಾಗ್ವೈಖರಿಯನ್ನು ಜ್ಞಾನಿಗಳು ಕಂಡಿರುವ ರೀತಿ ಹೀಗಿದೆ :

**ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।**
**ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥**

– ಶ್ರೀ ವ್ಯಾಸರಾಜರು (ನ್ಯಾಯಾಮೃತ)

**ನೋ ಧತ್ತೇ ಜಡತಾಂ ನ ಭಂಗಮಯತೇ ನೀಚಸ್ಥಲಂ ನೇಹತೇ**
**ಸ್ಖಾಲಿತ್ಯಂ ನ ಚ ಯಾತಿ ನೈತಿ ಕೃಶತಾಂ ಕ್ಷೋಭಂ ಕ್ವಚಿನ್ನಾಂಚತೇ ।**
**ಮಾನಂ ನೋಜ್ಝತಿ ನೋ ಜಹಾತಿ ಚ ಪದಂ ವ್ಯರ್ಥಂ ನ ಕೋಕೂಯತೇ**
**ಕಲ್ಯೇಯಂ ಜಯತೀರ್ಥಕೋವಿದವಚಃಕಲ್ಲೋಲಿನೀ ಸೇವ್ಯತಾಮ್ ॥**

– ಶ್ರೀ ವಿಷ್ಣುದಾಸಾಚಾರ್ಯರು (ವಾದರತ್ನಾವಳಿ)

ಬರೆದಿರುವ ಶ್ರೀಮದಾಚಾರ್ಯರ ಗ್ರಂಥಗಳಿಗೆ ತಾವು ಟೀಕೆ ರಚಿಸಿಲ್ಲ ಎಂಬುದು ಇವರ ಹಿರಿಮೆಯ ಮತ್ತೊಂದು ಮುಖ.

ಶ್ರೀಜಯತೀರ್ಥರು ತಮ್ಮ ಟೀಕೆಗಳಲ್ಲಿ ಶ್ರೀಪದ್ಮನಾಭತೀರ್ಥರು ಮೊದಲಾದವರ ಟೀಕೆಗಳನ್ನು ವಿವರಗಳಿಗಾಗಿ ನೋಡಿ ಎಂದು ಉಲ್ಲೇಖಿಸಿರುವರು; ತತ್ತ್ವಪ್ರದೀಪದಲ್ಲಿ ಉಕ್ತವಾದ ಗೌತಮಶಾಪ ಮೊದಲಾದವುಗಳ ವಿವರವನ್ನು ನೀಡಿಲ್ಲ. ಇದರಿಂದಾಗಿ ಆ ಪ್ರಾಚೀನಟೀಕೆಗಳು ಗತಾರ್ಥವಾಗದಂತೆ ಮಾಡಿ, ಜಿಜ್ಞಾಸುಗಳಿಗೆ ಮಹದುಪಕಾರ ಮಾಡಿರುವರು ಎಂಬುದು ಅವರ ವಿದ್ವತ್ಪಕ್ಷಪಾತಕ್ಕೆ ಶ್ರೇಷ್ಠನಿದರ್ಶನ.

ಭೀಮಾನದಿಯ ಪ್ರವಾಹಕ್ಕೆ ಬಾಯಿ ಹಚ್ಚಿ ಜಲಪಾನ ಮಾಡುವ ಇವರ ಆಶ್ರಮ ಪೂರ್ವಪ್ರವೃತ್ತಿಯು ಅನಂತರ, ಭೀಮಾವತಾರರೇ ಆದ ಶ್ರೀಮದಾಚಾರ್ಯರ ಶಾಸ್ತ್ರಸಾಗರದಲ್ಲಿ ಆಳಕ್ಕೆ ಮುಳುಗಿ ಪ್ರಮೇಯರತ್ನಗಳನ್ನು ರಾಶಿ ಹಾಕುವ ದಿವ್ಯಪ್ರವೃತ್ತಿಯಾಗಿ ಮಾರ್ಪಟ್ಟಿತು. ಶತ್ರು ಸೈನ್ಯದಲ್ಲಿ ನುಗ್ಗಿ ಪ್ರತಿವೀರರನ್ನು ಶರವರ್ಷದಲ್ಲಿ ಸದೆದು ಜಯಪತಾಕೆಯನ್ನು ಹಾರಿಸುವ 'ಶಸ್ತ್ರವೀರ'ರಾಗಿದ್ದ ಇವರು ಅನಂತರದಲ್ಲಿ ಶಾಸ್ತ್ರಸಾಗರದಲ್ಲಿ ಮುಳುಗಿ ಪ್ರತಿವಾದಿಗಳನ್ನು ವಾಕ್ಶರಗಳಿಂದ ಸದೆದು ವೈಷ್ಣವಸಿದ್ಧಾಂತ ದುಂದುಭಿಯನ್ನು ಮೊಳಗಿಸುವ 'ಶಾಸ್ತ್ರವೀರ'ರಾಗಿ ಮೆರೆದು 'ಮಧ್ವಾಖ್ಯರಾಜ'ರಿಂದ ಆದೃತರಾದರು : **'ಸೇವೇ ತಂ ಜಯಿತೀರ್ಥವೀರಮನಿಶಂ ಮಧ್ವಾಖ್ಯರಾಜಾದೃತಮ್'**.

ಹೀಗೆ ಅಪಾರ 'ಶಸ್ತ್ರವೈದುಷ್ಯ'ದೊಂದಿಗೆ, ಅಗಾಧ 'ಶಾಸ್ತ್ರವೈದುಷ್ಯ'ವನ್ನೂ ಹೊಂದಿದ್ದ ಇಂತಹ ಮಹನೀಯರು ಇತಿಹಾಸದ ಪುಟಗಳಲ್ಲಿ ತುಂಬಾ ವಿರಳ.

ತ್ಯಾಗಭೋಗಗಳೆಂಬ ವಿಭಿನ್ನ ಜೀವನರೀತಿಗಳಲ್ಲಿ ತ್ಯಾಗವೊಂದೇ ತಾರಕ; ಭೋಗ ಎಂದಿದ್ದರೂ ಆತ್ಮನಾಶಕ; ತ್ಯಾಗವು ಭಗವಂತನ ಒಲುಮೆಗೂ, ಭೋಗವು ಆತ್ಮವಿನಾಶಕ್ಕೂ, ಇರುವ ರಾಜಮಾರ್ಗಗಳಾಗಿವೆ - **ತ್ಯಾಗೇನೈಕೇ ಅಮೃತತ್ವಮಾನಶುಃ ನಾರಾಯಣೋಪನಿಷತ್**. ತುಂಬುತಾರುಣ್ಯದಲ್ಲಿಯೇ ಸಾದಿನಾಡಿನ ಆಧಿಪತ್ಯ, ಚತುರಂಗ ಬಲ, ಧನಕನಕಾದಿ ಅಪಾರ ಸಂಪತ್ತು, ರೂಪಗುಣೋಚಿತರಾದ ನವವಿವಾಹಿತಪತ್ನಿಯರು, ವಾತ್ಸಲ್ಯಪೂರ್ಣ ಮಾತಾಪಿತೃಗಳು ಮೊದಲಾದ ಸಕಲ ಲೌಕಿಕಸುಖಗಳನ್ನು ತೃಣಪ್ರಾಯವಾಗಿ ತ್ಯಜಿಸಿ, ತತ್ತ್ವಚಿಂತನೆ, ಭಗವದನುಗ್ರಹ ಸಂಪಾದನೆಗಳಿಗೆ ವಿಶೇಷ ಅವಕಾಶವನ್ನೀಯುವ 'ಪರಮಹಂಸಾಶ್ರಮ'ವನ್ನು[೧] ಯೋಗ್ಯ ಗುರುಗಳಿಂದ ತುಂಬು ಶ್ರದ್ಧೆಯಿಂದ ಸ್ವೀಕರಿಸಿದ ಶ್ರೀಜಯತೀರ್ಥರ ಜೀವನರೀತಿ ತ್ಯಾಗದ ಪರಾಕಾಷ್ಠೆಯೇ ಆಗಿದೆ:

---

೧. ಸಂನ್ಯಾಸಸ್ತು ತುರೀಯೋ ಯೋ ನಿಷ್ಕ್ರಿಯಾಖ್ಯಃ ಸಧರ್ಮಕಃ ।
ನ ತಸ್ಮಾದುತ್ತಮೋ ಧರ್ಮೋ ಲೋಕೇ ಕಶ್ಚನ ವಿದ್ಯತೇ ॥ – ಇತಿ ನಾರದೀಯೇ (ಗೀತಾಭಾಷ್ಯ ೫/೨)
ಸಂನ್ಯಾಸೇ ತು ತುರೀಯೇ ವೈ ಪ್ರೀತಿರ್ಮಮ ಗರೀಯಸೀ ।
ಯೇಷಾಮತ್ರಾಧಿಕಾರೋ ನ ತೇಷಾಂ ಕರ್ಮೇತಿ ನಿಶ್ಚಯಃ ॥
– ಇತ್ಯಾದೇಶ್ಚ ಬ್ರಾಹ್ಮೇ (ಗೀತಾಭಾಷ್ಯ ೫/೨)

**ಶ್ರೀಮಸ್ಮಾತಾಪಿತೃಮುಖಜನೇ ಬಾಂಧವೇ ವರ್ತಮಾನೇ**
**ಕಾಂತಾಯುಗ್ಮೇ ಕಮಲವದನೇ ಚಾರ್ವಶೇಷಪ್ರತೀಕೇ ।**
**ತಾರುಣ್ಯೇಽಲಂ ರಜತಕನಕಾಶ್ವಾದಿಕೇ ವೈಭವೇಽಪಿ**
**ನ್ಯಸ್ತಾಶೇಷೋ ಯತಿರಯಮಭೂತ್ ಸೈವ ಲೋಕೇ ವಿರಕ್ತಃ ॥(ಭ.ಜ.ವಿ.೩-೨)**

ಭೋಗಕ್ಕೆ ವಿದಾಯ ಹೇಳಿ ತ್ಯಾಗವನ್ನು ಆಯ್ದುಕೊಳ್ಳುವುದರಲ್ಲೇ ಜೀವನದ ಶ್ರೇಯಸ್ಸು ಅಡಗಿದೆ ಎಂಬ ತತ್ತ್ವವನ್ನು ತಮ್ಮ ಬಾಳಿನ ರೀತಿಯಿಂದ ಸ್ಫುಟಪಡಿಸಿದ ಇವರು ಭವಸಾಗರದ ಪಾಂಥರಿಗೆ ಭಾಗವತಧರ್ಮ(ದಿಕ್) ಸೂಚಿಯೂ ಆಗಿದ್ದಾರೆ :

**ಕುಪಿತಾಹಿಫಣಚ್ಛಾಯಾಸಮೀಕೃತ್ಯಾಪರಂ ಸುಖಮ್ ।**
**ಸೇವಂತೇ ಯತ್ಪದಂ ಧೀರಾಸ್ತಂ ಭಜೇ ವಲ್ಲಭಂ ಶ್ರಿಯಃ ॥ -ನ್ಯಾಯಸುಧಾ ೩-೧**

ಮಾನಸಿಕವಾಗಿಯಾದರೂ ಅಂತಹ ತ್ಯಾಗಕ್ಕೆ ಸಿದ್ಧವಾಗದ ಯಾರಿಗೂ ಭಗವಂತನ ಒಲುಮೆ ಶಕ್ಯವಲ್ಲ; ಈ ದೃಷ್ಟಿಯಿಂದ ಶ್ರೀಜಯತೀರ್ಥರ ಜೀವನವೈಖರಿಯಿಂದ ಧ್ವನಿತ-ವಾಗುವ ತತ್ತ್ವ ತುಂಬ ಅಮೂಲ್ಯವಾದುದು. ವಿಶಿಷ್ಟರೀತಿಯಲ್ಲಿ ಮಾತಾಪಿತೃಗಳು, ಪತ್ನಿ ಮೊದಲಾದವರಿಗೆ ಅಭಯವನ್ನಿತ್ತ ಇವರ ತಪಸ್ಸಿದ್ಧಿ ಅಗಾಧವೂ ಉದ್ಬೋಧಕವೂ ಆಗಿದೆ : '**ಸರ್ವೇಷಾಮಭಯಂ ದತ್ವಾ ವಿರಕ್ತಃ ಪ್ರವ್ರಜೇದ್ಧರಿಮ್ । ಶ್ರುತ್ವಾ- ಯತಿಪ್ರಣವಕಲ್ಪ**'. ಹೀಗೆ ಶ್ರೀಜಯತೀರ್ಥರ ಕೃತಿಗಳು ಶಾಸ್ತ್ರವಾಗಿರುವಂತೆ ಅವರ ಜೀವನವೂ ಶಾಸ್ತ್ರದಂತೆ ಅಧ್ಯೇತವ್ಯವಾಗಿದೆ :(**ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ । ... ಆಚಾರಶ್ಚೈವ ಸಾಧೂನಾಂ -ಮನುಸ್ಮೃತಿ**).

ಮಹಾಭಾರತದಲ್ಲಿನ ದಕ್ಷಿಣಗೋಗ್ರಹಣ ಮತ್ತು ಉತ್ತರಗೋಗ್ರಹಣಗಳಲ್ಲಿ ಶತ್ರುಪಕ್ಷದ ಮಹಾವೀರರನ್ನು ತಮ್ಮ ಬಲ ಮತ್ತು ಬಾಣಗಳಿಂದ ಪರಾಭವಗೊಳಿಸಿ ಗೋಮೋಚನ ಮಾಡಿದ ಭೀಮಾರ್ಜುನರಂತೆ ದುರ್ವಾದಿಕೃತ ಬ್ರಹ್ಮಮೀಮಾಂಸಾದಿ ಶಾಸ್ತ್ರಗೋಗ್ರಹಣವನ್ನು ತಮ್ಮ ಭಾಷ್ಯ ಮತ್ತು ಟೀಕೆಗಳಿಂದ ಪರಾಭವಗೊಳಿಸಿದ ಶ್ರೀಮಧ್ವ ಜಯತೀರ್ಥರು ಮಾನ್ಯರಾಗಿದ್ದಾರೆ. ಅರ್ಜುನನಿಗೆ ಶ್ರೀಕೃಷ್ಣಸ್ಮೃತಿ ಕಪಿಧ್ವಜಗಳು ರಕ್ಷೆಯಾಗಿದ್ದಂತೆ ಶ್ರೀಜಯ-ತೀರ್ಥರಿಗೆ (ವಾಸಿಷ್ಠ) ಕೃಷ್ಣ ಬಾದರಾಯಣನ ಬ್ರಹ್ಮಸೂತ್ರ ಮತ್ತು ಅವುಗಳ ಶ್ರೀ ಮಧ್ವ-ಭಾಷ್ಯಗಳು ಶ್ರೀರಕ್ಷೆಯಾಗಿವೆ ಎಂಬುದೂ ಗಮನಾರ್ಹ. ಇಂದ್ರ ಮತ್ತು ಅರ್ಜುನರೊಂದಿಗಿನ ಈ ಬಗೆಯ ಅನೇಕ ಸಾಮ್ಯಾಂಶಗಳು ಶ್ರೀಜಯತೀರ್ಥರ ಜೀವನ ಮತ್ತು ಸಾಧನೆಗಳಲ್ಲಿ ಕಂಡುಬರುತ್ತವೆ.

ಪ್ರಸಿದ್ಧ ಟಿಪ್ಪಣೀಕಾರರಾದ ಶ್ರೀಬಿದರಹಳ್ಳಿ ಶ್ರೀನಿವಾಸತೀರ್ಥರ ''ಸರ್ವಜ್ಞಕಲ್ಪ''ರು ಎಂಬ ಮಾತಿನಲ್ಲಿ ವೈಷ್ಣವ ಪರಂಪರೆಯು ಶ್ರೀ ಟೀಕಾಚಾರ್ಯರನ್ನು ಗೌರವಿಸುವ ರೀತಿ ತುಂಬಾ ಪರಿಣಾಮಕಾರಿಯಾಗಿ ಪ್ರತಿಬಿಂಬಿತವಾಗಿದೆ.



ಶ್ರೀಅಕ್ಷೋಭ್ಯತೀರ್ಥರ ಮೂಲವೃಂದಾವನ, ಮಳಖೇಡ



ಶ್ರೀಅಕ್ಷೋಭ್ಯತೀರ್ಥರ ಮೂಲವೃಂದಾವನ (ಅಲಂಕೃತ), ಮಳಖೇಡ



ಶ್ರೀಜಯತೀರ್ಥರ ಮೂಲವೃಂದಾವನ, ಮಳಖೇಡ



ಶ್ರೀಜಯತೀರ್ಥರ ಮೂಲವೃಂದಾವನ (ರಜತಕವಚ), ಮಳಖೇಡ



ಶ್ರೀವ್ಯಾಸತೀರ್ಥರ ಮೂಲಬೃಂದಾವನ, ಮಳಖೇಡಕ್ಷೇತ್ರ



ಶ್ರೀರಘುನಾಥತೀರ್ಥರ ಮೂಲಬೃಂದಾವನ, ಮಳಖೇಡಕ್ಷೇತ್ರ



ಶ್ರೀಪ್ರಸನ್ನವೇಂಕಟೇಶದೇವರು, ಮಳಖೇಡ



ಶ್ರೀಪ್ರಸನ್ನವೇಂಕಟೇಶದೇವರ ಬಳಿಯಲ್ಲಿರುವ ಶ್ರೀರುದ್ರದೇವರು, ಮಳಖೇಡ



ಶ್ರೀಸಂತಾನಗೋಪಾಲಕೃಷ್ಣದೇವರು, ಮಳಖೇಡ



ಶ್ರೀಪ್ರಾಣದೇವರು (ಶ್ರೀಸಂತಾನಗೋಪಾಲಕೃಷ್ಣದೇವರ ಗುಡಿಯ ಎದುರು), ಮಳಖೇಡ



ಶ್ರೀಮಲಯಾದ್ರಿಮಾಧವ, ಮಳಖೇಡ



ಶ್ರೀಮಲಯಾದ್ರಿಮಾಧವದೇವಸ್ಥಾನದಲ್ಲಿರುವ ಶ್ರೀಕೇಶವದೇವರು, ಮಳಖೇಡ



ಶ್ರೀಅಕ್ಷೋಭ್ಯತೀರ್ಥಪ್ರತಿಷ್ಠಿತ ಕೋಟೆ ಶ್ರೀಪ್ರಾಣದೇವರು



ಶ್ರೀಅಕ್ಷೋಭ್ಯತೀರ್ಥ ಮಂಟಪ, ಮಳಖೇಡ



ಕೋಟೆಯ ದೃಶ್ಯ, ಮಳಖೇಡ

ಕಾಗಿನೀನದಿಯ ದೃಶ್ಯ, ಮಳಖೇಡ



ಕಾಗಿಣೀತೀರದ ಆಚೆಯ ದಡದಿಂದ ಕಾಣುವ ವೃಂದಾವನ ಸ್ಥಳದ ದೃಶ್ಯ



ಶ್ರೀಜಯತೀರ್ಥರ ಗುಹೆ ಇರುವ ಬೆಟ್ಟ(ಎಡಭಾಗದಲ್ಲಿ)
ಹಾಗೂ ತಟಾಕ (ಬಲಭಾಗದಲ್ಲಿ), ಯರಗೋಳ



ಶ್ರೀಜಯತೀರ್ಥರು ಭಕ್ತರಿಗೆ
ದರ್ಶನ ನೀಡುತ್ತಿದ್ದ ಬಂಡೆ,
ಯರಗೋಳ



ಶ್ರೀಜಯತೀರ್ಥರು ಟೀಕೆಗಳನ್ನು
ಬರೆದ ಗುಹೆಯ ಹೊರನೋಟ



ಶ್ರೀಗ್ರಂಥಸಾಕ್ಷಿ ಪ್ರಾಣದೇವರು, ಯರಗೋಳ



ಶ್ರೀಜಯತೀರ್ಥರು ಟೀಕೆಗಳನ್ನು ರಚಿಸಿದ ಗುಹೆಯ ದ್ವಾರ



ಸರ್ಪರೂಪದಲ್ಲಿ ಶ್ರೀಜಯತೀರ್ಥರು ಸನ್ನಿಹಿತರಾಗಿರುವ ದೃಶ್ಯ



ಶ್ರೀಜಯತೀರ್ಥರು ಟೀಕೆಗಳನ್ನು ರಚಿಸಿದ ಸ್ಥಳ



ಶ್ರೀಜಯತೀರ್ಥರ ತಪಃಶಕ್ತಿಯಿಂದ ದೃಢಗೊಂಡ ತಟಾಕ, ಯರಗೋಳ



ತಟಾಕದ ಮತ್ತೊಂದು ನೋಟ



ಶ್ರೀಪ್ರಾಣದೇವರು ಹಾಗೂ ವೃಂದಾವನಗಳು, ಯರಗೋಳ



ಗಂಗಾದೇವಿ ಪ್ರತ್ಯಕ್ಷವಾದ ಸ್ಥಳ, ಯರಗೋಳ



ಶ್ರೀರಾಮಚಂದ್ರತೀರ್ಥರ
ಮೂಲವೃಂದಾವನ, ಯರಗೋಳ



ಮಂಗಳವೇಢೆಯ
ಶ್ರೀಜಯತೀರ್ಥರ
ಗೃಹದ ಪ್ರವೇಶದ್ವಾರ



ಮಂಗಳವೇಢೆಯ ಶ್ರೀಜಯತೀರ್ಥರ
ಗೃಹದ ಹೊರವಲಯದಲ್ಲಿರುವ
ಒಂದು ಪುರಾತನ ಬಾವಿ



ಮಂಗಳವೇಢೆಯಲ್ಲಿರುವ
ಶ್ರೀಜಯತೀರ್ಥರ ಗೃಹದ
ಒಳದ್ವಾರ

## ಮಂಗಳವೇಢೆಯ ಶಿಥಿಲ ಅರಮನೆಯ ಕಲಾತ್ಮಕ ತೊಲೆಗಳ ದೃಶ್ಯಗಳು









ಶ್ರೀಜಯತೀರ್ಥರು
ತಮ್ಮ ಪೂರ್ವಾಶ್ರಮದಲ್ಲಿ
ಪೂಜಿಸುತ್ತಿದ್ದ
ಶ್ರೀವಿಜಯವಿಟ್ಠಲದೇವರು,
ಮಂಗಳವೇಢೆ





ಶ್ರೀಜಯತೀರ್ಥರು
ಜನಿಸಿದ ಸ್ಥಳ



ಶ್ರೀಜಯತೀರ್ಥರು
ಜನಿಸಿದ ಸ್ಥಳದ
ಕೆಳಭಾಗದಲ್ಲಿರುವ ಗುಹೆ



ಮಂಗಳವೇಢೆಯ
ಕೋಟೆ

*ಚಿತ್ರಗಳು: ಸಮೀರ ವಿ. ಕುಲಕರ್ಣಿ, ಗುಲಬರ್ಗಾ*

ಆಶ್ರಮಸ್ವೀಕಾರಕ್ಕೆ ಬಹುಮುಂಚಿತವಾಗಿಯೇ ಶ್ರೀಮದಾಚಾರ್ಯರು ಶ್ರೀರಾಮದೇವರ ಆರಾಧನೆ ಮಾಡುವಂತೆ ಇವರಿಗೆ ಪ್ರತಿನಿತ್ಯ ಸ್ವಪ್ನಸೂಚನೆ ನೀಡುತ್ತಿದ್ದರೆಂಬ ಅಪೂರ್ವ ಉಲ್ಲೇಖ ಶ್ರೀಜಯೀಂದ್ರೋದಯದಲ್ಲಿದೆ (೪/೪೭):

**ಪ್ರತಿದಿನಮವದತ್ ತಂ ಸ್ವಪ್ನಕಾಲೇ ಕದಾಚಿತ್**
**ದಶಮತಿಯತಿರೂಪೀ ವಾಯುರಾಗತ್ಯ ಶೀಘ್ರಂ**
**ರಘುವರಪದಕಂಜಾರಾಧನಂ ಕುರ್ವಿತಿ ತ್ವಮ್ ॥**

ಶ್ರೀಮದಾನಂದತೀರ್ಥರ ಸಂದೇಶದಂತೆಯೇ ನಡೆಯಿತು. ಸತ್ಯಲೋಕಾಧಿಪತಿಗಳಾದ ಅವರ ವಾಣಿ ಅಪೂರ್ವರೀತಿಯಲ್ಲಿ ಸತ್ಯವೆನ್ನಿಸಿ, ಇಡೀ ವೇದಾಂತಪರಂಪರೆಯಲ್ಲೇ ಅಪೂರ್ವವೆನ್ನಿಸುವ ಕೃತಿರತ್ನಗಳನ್ನು ರಚಿಸುವ ಮೂಲಕ ಶ್ರೀಜಯತೀರ್ಥರು ಅನುಪಮವಾದ ಶ್ರೀರಾಮಸೇವೆಯನ್ನು ಸಲ್ಲಿಸಿ, ಅಜರಾಮರರೆನ್ನಿಸಿರುವರು.

ಮಳಖೇಡದ ಅರಸೊತ್ತಿಗೆ ಇಂದು ಉಳಿದಿಲ್ಲ; ಆದರೆ ಶ್ರೀಜಯತೀರ್ಥರಿಂದ ಪ್ರವರ್ತಿತ-ವಾದ ಮಧ್ವಸಿದ್ಧಾಂತ ಬೆಳಗುತ್ತಿದೆ. ಶಸ್ತ್ರಘೋಷದ ನಾಡಿನಲ್ಲಿ ಶಾಸ್ತ್ರಘೋಷ ಮೊಳಗಿತು. ಅರಸೊತ್ತಿಗೆ ನಾಶವಾಗಿ ಪುಣ್ಯಕ್ಷೇತ್ರ ಉದಿಸಿತು. ಇದೆಲ್ಲ ಸಾಧ್ಯವಾದದ್ದು ಶ್ರೀಜಯತೀರ್ಥರಿಂದ; ಅವರು ಆರಾಧಿಸಿದ ಶ್ರೀಮಧ್ವಮಾಧವರ ಕರುಣೆಯಿಂದ. ಶ್ರೀಹರಿವಾಯುಗಳ ಹಿರಿಮೆಯನ್ನು ಹೀಗೆ ಅನುಸಂಧಾನ ಮಾಡುವುದೇ ಶಾಶ್ವತಸಿದ್ಧಾಂತ; ತತ್ತ್ವಸಿದ್ಧಾಂತ.

**॥ ಶ್ರೀಕೃಷ್ಣಾರ್ಪಣಮಸ್ತು ॥**

ಅನುವ್ಯಾಖ್ಯಾನನಲಿನೇ ಯನ್ಮನಃಷಟ್ಪದಂಚರೀಕತಿ ।
ತಂ ವಂದೇ ಜಯತೀರ್ಥಾರ್ಯಂ ಜ್ಞಾನಭಕ್ತಿಸಮೃದ್ಧಯೇ ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸೂಕ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

******

# ಶ್ರೀಜಯತೀರ್ಥರ ಗ್ರಂಥಗಳ ಆದ್ಯಂತಶ್ಲೋಕಗಳು

## ೧. ನ್ಯಾಯಸುಧಾ (ಅನುವ್ಯಾಖ್ಯಾನ ಟೀಕಾ)

### (ಆದಿಶ್ಲೋಕಗಳು) ಅಧ್ಯಾಯ - ೧ :

ಶ್ರಿಯಃಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ-
ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ।
ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ
ನಮೋಽಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ ॥೧॥

ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ
ಪ್ರಾಬೋಧಿ ಪ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ತ್ವಂ ಪರಮ್ ।
ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಚಾಕಾರಿ ಸನ್ಮಾರ್ಗಗ-
ಸ್ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್ ॥೨॥

ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿ-
ರ್ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೇ ಸಕ್ತಿರ್ನ ವೈ ಬಾಧಿತೇ ।
ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸ ಮೇ
ಭೂಯಾತ್ ತತ್ತ್ವವಿನಿರ್ಣಯಾಯ ಭಗವಾನಾನಂದತೀರ್ಥೋ ಮುನಿಃ ॥೩॥

ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।
ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥೪॥

ರಮಾನಿವಾಸೋಚಿತವಾಸಭೂಮಿಃ
ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭ-
ತೀರ್ಥಾಮೃತಾಬ್ಧಿರ್ಭವತಾದ್ವಿಭೂತ್ಯೈ ॥೫॥

ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ ಮಮ ॥೬॥

ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ।
ಅನುವ್ಯಾಖ್ಯಾನಸಲಿನೇ ಚಂಚರೀಕತಿ ಮೇ ಮನಃ ॥೭॥

ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ
ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಮ್ ।
ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ
ಪ್ರಪನ್ನಾ ಮಾನ್ಯಾಃ ಸ್ಮಃ ಕಿಮಪಿ ಚ ವದಂತೋಽಪಿ ಮಹತಾಮ್ ॥೮॥

ಅಧ್ಯಾಯ - ೨ :

ಯತ್ಪದಂ ವೇದಸಂವೇದ್ಯಂ ಕಟಾಕ್ಷೇಣಾಪಿ ವೀಕ್ಷಿತುಮ್ ।
ನ ಕ್ಷಮಂತೇ ವಿಮತಯಸ್ತಮುಪಾಸೇ ಶ್ರಿಯಃಪತಿಮ್ ॥೧॥

ಅಧ್ಯಾಯ - ೩ :

ಕುಪಿತಾಹಿಫಣಚ್ಛಾಯಾಸಮೀಕೃತ್ಯಾಪರಂ ಸುಖಮ್ ।
ಸೇವಂತೇ ಯತ್ಪದಂ ಧೀರಾಸ್ತಂ ಭಜೇ ವಲ್ಲಭಂ ಶ್ರಿಯಃ ॥೧॥

ಅಧ್ಯಾಯ - ೪ :

ಯದೀಯಚರಣಾಂಭೋಜಚ್ಛಾಯಾಮಾಶ್ರಿತ್ಯ ನಿರ್ವೃತಾಃ ।
ನಂದಂತಿ ಸತತಂ ಮುಕ್ತಾಃ ಸಂಶ್ರಯೇ ತಂ ಶ್ರಿಯಃಪತಿಮ್ ॥೧॥

ಅಂತ್ಯ ಶ್ಲೋಕಗಳು :

ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।
ಧ್ರಿಯತಾಂ ಸದಯೇ ಹೃದಯೇ ಕಮಲಾಮಹಿಲೇನ ಪೂರುಷೇಣ ॥೧॥

ನ ವೈದುಷ್ಯಭ್ರಾಂತ್ಯಾ ನ ಚ ವಚನಚಾತುರ್ಯಕುಧಿಯಾ
ನ ಮಾತ್ಸರ್ಯಾವೇಶಾನ್ನ ಚ ಚಪಲತಾದೋಷವಶತಃ ।
ಪರಂ ಶ್ರದ್ಧಾಜಾಡ್ಯಾದಕೃಷಿ ಕೃತಿರಾಚಾರ್ಯವಚಸಿ
ಸ್ಖಲನ್ನಪ್ಯೇತಸ್ಮಾಜ್ಜಗತಿ ನ ಹಿ ನಿಂದ್ಯೋಽಸ್ಮಿ ವಿದುಷಾಮ್ ॥೨॥

ಅನುವ್ಯಾಖ್ಯಾಮೃತಾಂಭೋಧೇಃ ಸಮುತ್ಪನ್ನಾಽತಿನಿರ್ಮಲಾ ।
ಇಯಂ ನ್ಯಾಯಸುಧಾ ಭೌಮ್ಯೈರ್ವಿಬುಧೈಃ ಸೇವ್ಯತಾಂ ಸದಾ ॥೩॥

ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ-
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।

ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ
ಚತುರ್ಥೇಽಧ್ಯಾಯೇಽಸ್ಮಿನ್ ಚರಮಚರಣಃ ಪರ್ಯವಸಿತಃ ॥೪॥

*****

## ೨. ತತ್ತ್ವಪ್ರಕಾಶಿಕಾ (ಬ್ರಹ್ಮಸೂತ್ರಭಾಷ್ಯ ಟೀಕಾ)

ಆದಿಶ್ಲೋಕಗಳು :

ಶುದ್ಧಾನಂದೋರುಸಂವಿದ್ದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಂ
ಚಿಂತಾಸಂತಾಪಲೇಪೋದ್ಭವಮೃತಿಮುಖರಾಶೇಷದೋಷಾತಿದೂರಮ್ ।
ಸದ್ಭಿರ್ವೈರಾಗ್ಯಭಕ್ತಿಶ್ರುತಿಮತಿನಿಯತಧ್ಯಾನಜಜ್ಞಾನಯೋಗಾ-
ದ್ಗಮ್ಯಂ ವಂದೇ ಮುಕುಂದಾಭಿಧಮಮಲಮಲಂ ಬ್ರಹ್ಮ ವೇದಾಂತವೇದ್ಯಮ್ ॥೧॥

ಯಾಜ್ಞ್ಯಾ ಮಂದರಲೋಲಿತಾದ್ಯತ ಉದ್ಯೈದ್ದಿವ್ಯೇಂದಿರಾ ನಿರ್ಜರೈ-
ರ್ಜಾತೋ ಭಾರತಪಾರಿಜಾತಸುರತರುಃ ಸದ್ಬ್ರಹ್ಮಸೂತ್ರಾಮೃತಮ್ ।
ಆಸೀತ್ ತಂತ್ರಪುರಾಣಸನ್ಮಣಿಗಣೋ ಜಾತಃ ಶುಕೇಂದುಃ ಸದಾ
ಸೋಽಯಂ ವ್ಯಾಸಸುಧಾನಿಧಿರ್ಭವತು ಮೇ ಭೂತ್ಯೈ ಸತಾಂ ಭೂತಿದಃ ॥೨॥

ಸ್ವಾಂತಧ್ವಾಂತನಿಕೃಂತನೇ ಜಿತಮಹಾವೈಕರ್ತನಾಂಶುವ್ರಜಂ
ನಿರ್ದೋಷಂ ಜಿತಚಂದ್ರಚಂದ್ರಿಕಮಲಂ ತಾಪತ್ರಯೋನ್ಮೂಲನೇ ।
ಗಾಂಭೀರ್ಯೇ ಜಿತಸಿಂಧುರಾಜಮಮಿತಂ ಭಾಷ್ಯಂ ಯದಾಸ್ಯಾಂಬುಜಾ-
ದಾವಿರ್ಭೂತಮಮಂದಬೋಧಭಗವತ್ಪಾದಾನ್ ಪ್ರಪದ್ಯೇಽಥ ತಾನ್ ॥೩॥

ಶ್ರೀಮಧ್ವಸಂಸೇವನಲಬ್ಧಶುದ್ಧವಿದ್ಯಾ-
ಸುಧಾಂಭೋನಿಧಯೋಽಮಲಾ ಯೇ ।
ಕೃಪಾಲವಃ ಪಂಕಜನಾಭತೀರ್ಥಾಃ
ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥೪॥

ಶ್ರೀಮದ್ರಮಾರಮಣಸದ್ಗಿರಿಪಾದಸಂಗಿ-
ವ್ಯಾಖ್ಯಾನಿನಾದದಲಿತಾಖಿಲದುಷ್ಟದರ್ಪಮ್ ।
ದುರ್ವಾದಿವಾರಣವಿದಾರಣದಕ್ಷದೀಕ್ಷ-
ಮಕ್ಷೋಭ್ಯತೀರ್ಥಮೃಗರಾಜಮಹಂ ನಮಾಮಿ ॥

ಅಥ ತತ್ಕೃಪಯಾ ಬ್ರಹ್ಮಸೂತ್ರಭಾಷ್ಯಂ ಯಥಾಮತಿ ।
ವ್ಯಾಕುರ್ವೇ ಶ್ರೀಮದಾನಂದತೀರ್ಥಾರ್ಯಮುಖನಿಃಸೃತಮ್ ॥೬॥

ಗಂಗಾಸಂಗೇನ ನೈರ್ಮಲ್ಯಂ ರಥ್ಯಾದ್ಭಿರ್ಲಭ್ಯತೇ ಯಥಾ ।
ವಾಚೋವಿಶುದ್ಧಿಸಿದ್ಧ್ಯರ್ಥಂ ಸಂಗಮ್ಯಂತೇ ಗುರೋರ್ಗಿರಃ ॥೭॥

ಅಂತ್ಯಶ್ಲೋಕಗಳು :

ಉತ್ಪತ್ತಿಸ್ಥಿತಿಸಂಹೃತಿಪ್ರಭೃತಯೋ ಭಾವಾ ಭವಂತ್ಯಾಜ್ಞಯಾ
ಪದ್ಮಾಪದ್ಮಭವಾದಿಸರ್ವಜಗತೋ ವ್ಯಸ್ತಾಃ ಸಮಸ್ತಾಃ ಸದಾ ।
ಯಸ್ಯಾಗಣ್ಯಗುಣಾಕರಸ್ಯ ಕರುಣಾಪೀಯೂಷವಾರಾಂನಿಧೇಃ
ಸೋಽಯಂ ದೂರನಿರಸ್ತದೋಷನಿಕರಃ ಪ್ರೀತೋಽಸ್ತು ನಾರಾಯಣಃ ॥೧॥

ಅಗಾಧಬೋಧೈರ್ವಿವೃತಾತಿಭಾವ-
ಭಾಷ್ಯಾನುವಾದೇನ ನ ಮೇಽಪರಾಧಃ ।
ನ ಹೀಂದಿರಾರಾಧ್ಯಪದೋ ಮುಕುಂದೋ
ದೂರ್ವಾಂಕುರೈರ್ಮಂದಧನೈರಪೂಜ್ಯಃ ॥೨॥

ಮಧ್ವದುಗ್ಧಾಬ್ಧಿಸಂಭೂತಭಾಷ್ಯೇಂದೂದಿತಕೌಮುದೀ ।
ಭೂಯಾತ್ ಸತ್ಕುಮುದಾನಂದದಾತ್ರೀ ತತ್ತ್ವಪ್ರಕಾಶಿಕಾ ॥೩॥

*****

## ೩. ನ್ಯಾಯವಿವರಣ ಟೀಕಾ

ಆದಿಶ್ಲೋಕಗಳು :

ಜಯಂತಿ ಜಾನಕೀಭರ್ತುಶ್ಚರಣಾಂಭೋಜರೇಣವಃ ।
ನಮತ್ಸುರಕಿರೀಟಸ್ಥಾನ್ ಯೇ ಮಣೀನತಿಶೇರತೇ ॥೧॥

ದುರಂತದುರಿತಧ್ವಾಂತವಿಧ್ವಂಸನಪಟೀಯಸೇ ।
ಬಾದರಾಯಣಸಂಜ್ಞಾಯ ಪರಸ್ಮೈ ಮಹಸೇ ನಮಃ ॥೨॥

ನಮಾಮಿ ಶ್ರೀಮದಾನಂದತೀರ್ಥಾಚಾರ್ಯಂ ಪರಂ ಗುರುಮ್ ।
ಯಸ್ಯ ವಾಣೀ ಕೃಪಾಣೀಯಂ ನಿಕೃಂತತಿ ಭವಾಟವೀಮ್ ॥೩॥

ಪ್ರಣಮ್ಯ ಚರಣಾಂಭೋಜೇ ಗುರೂಣಾಂ ತತ್ಕೃಪಾಬಲಾತ್ ।
ಸನ್ನ್ಯಾಯವಿವೃತಿವ್ಯಾಖ್ಯಾಂ ಕರಿಷ್ಯಾಮಿ ಯಥಾಮತಿ ॥೪॥

ಅಂತ್ಯಶ್ಲೋಕ : ಇಲ್ಲ

## ೪. ಪ್ರಮೇಯದೀಪಿಕಾ (ಗೀತಾಭಾಷ್ಯ ಟೀಕಾ)

ಆದಿಶ್ಲೋಕಗಳು :

ಗುಣಗಣನಿಲಯಂ ಪತಿಂ ರಮಾಯಾ
ಜಗದಘದಹನಂ ಚ ವಾಸವೀಸೂನುಮ್ ।

ಮುನಿಕುಲತಿಲಕಂ ಚ ಪೂರ್ಣಬೋಧಂ
ಗುರುಮಪಿ ಪರಮಂ ಗುರುಂ ಚ ಮೇ ವಂದೇ

ಆನಂದತೀರ್ಥಭಗವತ್ಪಾದಾಚಾರ್ಯವಿನಿರ್ಮಿತಮ್ ।
ವ್ಯಾಖ್ಯಾಸ್ಯೇ ಭಗವದ್ಗೀತಾಭಾಷ್ಯಂ ತತ್ಕರುಣಾಬಲಾತ್

ಅಂತ್ಯಶ್ಲೋಕಗಳು :

ಕರತಲಮಿಲಿತಾಮಲಕಮಿವ ಪ್ರಭುಣಾ ಯೇನೇದಮವಗತಂ ವಿಶ್ವಮ್ ।
ಸ ಜಯತಿ ಜನಕಸುತಾಯಾಃ ಕಾಂತಃ ಶ್ರೀರಘುನಂದನೋ ದೇವಃ

ನಮಾಮಿ ವ್ಯಾಸದಾಸಸ್ಯ ಪೂರ್ಣಬುದ್ಧೇಃ ಪದಾಂಬುಜೇ ।
ಸತಾಮರಶಿರೋರತ್ನರಾಜನೀರಾಜಿತೇ ಸದಾ

ಅಕ್ಷೋಭ್ಯತೀರ್ಥಗುರುಣಾ ಶುಕವಚ್ಛಿಕ್ಷಿತಸ್ಯ ಮೇ ।
ವಚೋಭಿರಮೃತಪ್ರಾಯೈಃ ಪ್ರೀಯಂತಾಂ ಸತತಂ ಬುಧಾಃ

*****

## ೫. ನ್ಯಾಯದೀಪಿಕಾ (ಗೀತಾತಾತ್ಪರ್ಯಟೀಕಾ)

ಆದಿಶ್ಲೋಕಗಳು :

ಇಂದಿರಾವದನಾಂಭೋಜರಾಜಹಂಸಾಯ ವಿಷ್ಣವೇ ।
ಅಮಂದಾನಂದಸಂದೋಹಸುಂದರಾಕೃತಯೇ ನಮಃ

ಧರ್ಮವಿಜ್ಞಾನವೈರಾಗ್ಯಪರಮೈಶ್ವರ್ಯಶಾಲಿನಃ ।
ಆನಂದತೀರ್ಥಭಗವತ್ಪಾದಾನ್ ವಂದೇ ನಿರಂತರಮ್

ಸ ಪದ್ಮನಾಭತೀರ್ಥಾರ್ಕಗೋಗಣೋಽಸ್ತು ದೃಶೇ ಮಮ ।
ನ ತತ್ತ್ವಮಾರ್ಗೇ ಗಮನಂ ವಿನಾ ಯದುಪಜೀವನಮ್

ಪ್ರಣಮ್ಯ ಚರಣದ್ವಂದ್ವಂ ಗುರೂಣಾಂ ತತ್ಕೃಪಾಬಲಾತ್ ।
ವ್ಯಾಕರಿಷ್ಯೇ ಯಥಾಬೋಧಂ ಗೀತಾತಾತ್ಪರ್ಯನಿರ್ಣಯಮ್

ಅಂತ್ಯಶ್ಲೋಕ :

ಶ್ರೀಮದಾನಂದತೀರ್ಥಾರ್ಯಹೃದಯಾಮಲಮಂದಿರಃ ।
ಇಂದಿರಾರಮಣಃ ಪ್ರೀತಿಂ ಯಾತು ದೀನದಯಾಪರಃ

*****

## ೬. ಸಂಬಂಧದೀಪಿಕಾ (ಋಗ್ಭಾಷ್ಯ ಟೀಕಾ)

ಆದಿಶ್ಲೋಕಗಳು :

ನಾರಾಯಣಾಭಿಧಂ ಜ್ಯೋತಿಃ ಪ್ರತ್ಯೂಹಧ್ವಾಂತಶಾಂತಿಕೃತ್ ।
ಕಮಲಾಕಮಲಾನಂದಮಂತಃಸ್ವಾಂತಮುಪಾಸ್ಮಹೇ ॥೧॥

ಋಚಾಂ ಪದಾನ್ಯುಪಾದಾಯ ತೇಷಾಂ ಭಾಷ್ಯಪದ್ಯೈಃ ಸಹ ।
ಕುರ್ಮಃ ಸಂವಾದಿತಾಮಾತ್ರಂ ಯಥಾಧೀತಂ ಯಥಾಮತಿ ॥೨॥

ಅಂತ್ಯಶ್ಲೋಕಗಳು :

ದೇವತಾಃ ಕಂಚುಕಾಯಂತೇ ವೇದೋ ಬಂದಿಜನಾಯತೇ ।
ಯಸ್ಯ ತಸ್ಮಿನ್ ರಮಾನಾಥೇ ಸುದೃಢಾ ಪ್ರೀತಿರಸ್ತು ಮೇ ॥೧॥

ಯೇ ಭವಂತಿ ಜನಾಃ ಸಂತಃ ಪ್ರಜ್ಞಾಸೌಜನ್ಯಶಾಲಿನಃ ।
ತೋಷಂ ತೇ ಮತ್ಕೃತೌ ಯಾಂತಿ ಕಿಮನ್ಯೈಃ ಪಶುಸನ್ನಿಭೈಃ ॥೨॥

ಶಬ್ದಾನಾಂ ಸಾಧನಂ ಸಮ್ಯಕ್ ತತ್ಪ್ರಯೋಜನಕೀರ್ತನಮ್ ।
ನಾಕಾರ್ಷಂ ವಿಸ್ತರಭಯಾದಿಹ ತತ್ ಕ್ಷಮತಾಂ ಬುಧೈಃ ॥೩॥

*****

## ೭. ಈಶಾವಾಸ್ಯಭಾಷ್ಯ ಟೀಕಾ

ಆದಿಶ್ಲೋಕಗಳು :

ಯಜ್ಞಂ ಯಜ್ಞಭುಜಂ ಪ್ರಾಜ್ಞಂ ಪೂರ್ಣಪ್ರಜ್ಞಮುನೀಶ್ವರಮ್ ।
ಮನೋಜ್ಞಗುಣಮಾಸೇವೇ ಸುಜ್ಞಾನದಮಹರ್ನಿಶಮ್ ॥೧॥

ಶ್ರೀಮಚ್ಛ್ರೀವದನಾಂಭೋಜಗತಸೌಂದರ್ಯಸೌರಭಮ್ ।
ಲಿಹದ್ಭ್ಯಾಂ ಲೋಚನಾಲಿಭ್ಯಾಂ ಭಗವಾನ್ ಪಾತು ನೋ ಹರಿಃ ॥೨॥

ಅಂತ್ಯಶ್ಲೋಕ :

ಕಮಲಾವದನಾಂಭೋಜರಾಜಹಂಸಾಯ ವಿಷ್ಣವೇ ।
ನಮೋ ಜಗಜ್ಜನಿಸ್ಥೇಮಹೇತವೇ ಪರಮಾತ್ಮನೇ ॥೧॥

*****

## ೮. ಷಟ್ಪ್ರಶ್ನೋಪನಿಷದ್ಭಾಷ್ಯ ಟೀಕಾ

ಆದಿಶ್ಲೋಕ :

ಪಾಂತು ನಃ ಪದ್ಮನಾಭಸ್ಯ ಶ್ರೀಪದಾಂಬುಜರೇಣವಃ ।
ಕಮಲಾಕಬರೀಭಾರಸುರಭೀಕರಣೋದ್ಯತಾಃ ॥

ಅಂತ್ಯಶ್ಲೋಕ :

ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।
ಧ್ರಿಯತಾಂ ಸದಯೇ ಹೃದಯೇ ಕಮಲಾಮಹಿಲೇನ ಪೂರುಷೇಣ ॥

*****

## ೯. ನ್ಯಾಯಕಲ್ಪಲತಾ (ಪ್ರಮಾಣಲಕ್ಷಣ ಟೀಕಾ)

ಆದಿಶ್ಲೋಕ :

ಪ್ರಣಮ್ಯಾಗಣ್ಯಕಲ್ಯಾಣಗುಣಾಬ್ಧಿಂ ಪುರುಷೋತ್ತಮಮ್ ।
ಪೂರ್ಣಬೋಧಾನಪಿ ಗುರೂನ್ ವ್ಯಾಕುರ್ವೇ ಮಾನಲಕ್ಷಣಮ್ ॥

ಅಂತ್ಯಶ್ಲೋಕ :

ಅಮರಾ ಭ್ರಮರಾಯಂತೇ ಕಮಲಾ ವರಟಾಯತೇ ।
ಯತ್ಪಾದಾಂಭೋರುಹದ್ವಂದ್ವೇ ವಂದೇ ತಂ ಪುರುಷೋತ್ತಮಮ್ ॥

*****

## ೧೦. ಕಥಾಲಕ್ಷಣ ಟೀಕಾ

ಆದಿಶ್ಲೋಕ :

ಶ್ರಿಯಃ ಕಮಿತುರಾನಮ್ಯ ಚರಣಾಂಬುರುಹದ್ವಯಮ್ ।
ಯಥಾಬೋಧಂ ವಿಧಾಸ್ಯಾಮಃ ಕಥಾಲಕ್ಷಣಪಂಚಿಕಾಮ್ ॥

ಅಂತ್ಯಶ್ಲೋಕ :

ಶ್ರೀಮದಾನಂದತೀರ್ಥಾರ್ಯಹೃದಯಾಮಲಮಂದಿರಾ ।
ಇಂದಿರಾರ್ಚಿತಪಾದಾಬ್ಜಾ ದೇವತಾ ಪಾತು ನಃ ಸದಾ ॥

*****

## ೧೧. ಮಾಯಾವಾದಖಂಡನ ಟೀಕಾ

ಆದಿಶ್ಲೋಕ :

ನರಸಿಂಹಮಸಹ್ಯೋರುಪ್ರತ್ಯೂಹತಿಮಿರಾಪಹಮ್ ।
ಪ್ರಣಿಪತ್ಯ ವ್ಯಾಕರಿಷ್ಯೇ ಮಾಯಾವಾದಸ್ಯ ಖಂಡನಮ್ ॥

ಅಂತ್ಯಶ್ಲೋಕ :

ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।
ಧ್ರಿಯತಾಂ ಸದಯೇ ಹೃದಯೇ ಕಮಲಾಮಹಿಲೇನ ಪೂರುಷೇಣ ॥

*****

## ೧೨. ಪ್ರಪಂಚಮಿಥ್ಯಾತ್ವಾನುಮಾನಖಂಡನ ಟೀಕಾ

ಆದಿಶ್ಲೋಕ :

ನತ್ವಾ ವಿಶ್ವೋದಯಸ್ಥೇಮಲಯಹೇತುಂ ಪತಿಂ ಶ್ರಿಯಃ ।
ಕುರ್ಮಃ ಪ್ರಪಂಚಮಿಥ್ಯಾತ್ವಮಾನಖಂಡನಪಂಚಿಕಾಮ್ ॥

ಅಂತ್ಯಶ್ಲೋಕ :

ಉತ್ಪತ್ತಿಸ್ಥಿತಿಭಂಗಂ ವಿಶ್ವಂ ಯಸ್ಮಾತ್ ಪ್ರಪದ್ಯತೇ ಪುರುಷಾತ್ ।
ಸ ಜಯತಿ ಜಗತಾಮಂತರ್ಯಾಮೀ ಸ್ವಾಮೀ ರಮಾನಾಥಃ ॥

*****

## ೧೩. ಉಪಾಧಿಖಂಡನ ಟೀಕಾ

ಆದಿಶ್ಲೋಕ :

ರಮಾಯಾ ರಮಣಂ ನತ್ವಾ ಗುಣಮಾಣಿಕ್ಯಮಂಡನಮ್ ।
ತತ್ತ್ವಪ್ರಕಾಶಿಕಾವ್ಯಾಖ್ಯಾಂ ಕರಿಷ್ಯಾಮೋ ಯಥಾಮತಿ ॥

ಅಂತ್ಯಶ್ಲೋಕ :

ಸದಾಸುರಶಿರೋರತ್ನಪ್ರಭಾಮೋಷಿ ನಖತ್ವಿಷಿ ।
ಕಮಲಾಕಮಿತುಃ ಪಾದಯುಗಲೇ ರತಿರಸ್ತು ಮೇ ॥

*****

## ೧೪. ಕರ್ಮನಿರ್ಣಯ ಟೀಕಾ

ಆದಿಶ್ಲೋಕಗಳು :

ಬ್ರಾಹ್ಮಣೋಪನಿಷನ್ಮಂತ್ರಭೇದಾ ವೇದಗಿರೋಽಖಿಲಾಃ ।
ಯತ್ಕ್ರೀಡಾಭೂಮಯಸ್ತಸ್ಮೈ ಪರಸ್ಮೈ ಬ್ರಹ್ಮಣೇ ನಮಃ ॥ ೧ ॥

ಪ್ರಣಮ್ಯ ಶ್ರೀಮದಾನಂದತೀರ್ಥಾರ್ಯಪದಪಂಕಜೇ ।
ಗುರೂಣಾಂ ಚ ಯಥಾಬೋಧಂ ವ್ಯಾಕುರ್ವೇ ಕರ್ಮನಿರ್ಣಯಮ್ ॥ ೨ ॥

ಅಂತ್ಯಶ್ಲೋಕ :

ಯತ್ಸಂಬಂಧೇನ ಕರ್ಮಾಣಿ ಫಲವಂತಿ ಭವಂತಿ ಹಿ ।
ಯಃ ಸರ್ವಕರ್ಮಣಾಂ ಕರ್ತಾ ತಸ್ಮೈ ಭಗವತೇ ನಮಃ ॥

*****

## ೧೫. ತತ್ತ್ವಸಂಖ್ಯಾನ ಟೀಕಾ

ಆದಿಶ್ಲೋಕ :

ಲಕ್ಷ್ಮೀಪತೇಃ ಪದಾಂಭೋಜಯುಗಂ ನತ್ವಾ ಗುರೋರಪಿ ।
ಕರಿಷ್ಯೇ ತತ್ತ್ವಸಂಖ್ಯಾನವ್ಯಾಖ್ಯಾನಂ ನಾತಿವಿಸ್ತರಮ್ ॥

ಅಂತ್ಯಶ್ಲೋಕ :

ಪದ್ಮಾಪದ್ಮಾಸನಾನಂತಪ್ರಭೃತೀದಂ ಯದಿಚ್ಛಯಾ ।
ಸತ್ತಾದಿ ಲಭತೇ ದೇವಃ ಪ್ರೀಯತಾಂ ಶ್ರೀಪತಿಃ ಸ ಮೇ ॥

## ೧೬. ತತ್ತ್ವವಿವೇಕ ಟೀಕಾ

ಆದಿಶ್ಲೋಕ :

ಪ್ರಣಮ್ಯ ರಮಣಂ ಲಕ್ಷ್ಮ್ಯಾಃ ಪೂರ್ಣಬೋಧಗುರೂನಪಿ ।
ವ್ಯಾಖ್ಯಾಂ ತತ್ತ್ವವಿವೇಕಸ್ಯ ಕರಿಷ್ಯಾಮೋ ಯಥಾಮತಿ ॥

ಅಂತ್ಯಶ್ಲೋಕ :

ಕರತಲಕಲಿತಾಮಲಕಪ್ರಖ್ಯಂ ಯಸ್ಯಾಖಿಲಂ ವಿಶ್ವಮ್ ।
ಕಮಲಾಪರಿವೃಢಮಮಲಂ ವಂದೇ ತಂ ವಂದ್ಯಪಾದಾಬ್ಜಮ್ ॥

*****

## ೧೭. ತತ್ತ್ವೋದ್ಯೋತ ಟೀಕಾ

ಆದಿಶ್ಲೋಕ :

ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ ರಮಣಂ ಶ್ರಿಯಃ ।
ಅಭಿವಂದ್ಯ ಯಥಾಬೋಧಂ ತತ್ತ್ವೋದ್ಯೋತಂ ವಿವೃಣ್ಮಹೇ ॥

ಅಂತ್ಯಶ್ಲೋಕ :

ಶ್ರೀಮದಾನಂದತೀರ್ಥಾರ್ಯಹೃದಯಾಂಭೋಜಮಂದಿರಃ ।
ಕಮಲಾಶ್ಲೇಷರಸಿಕಃ ಪ್ರೀಯತಾಂ ನಃ ಪರಃ ಪುಮಾನ್ ॥

*****

## ೧೮. ವಿಷ್ಣುತತ್ತ್ವವಿನಿರ್ಣಯ ಟೀಕಾ

ಆದಿಶ್ಲೋಕಗಳು : ಪರಿಚ್ಛೇದ - ೧ :

ವಿಶ್ವಸ್ಯೋದಯಮಾತನೋತಿ ತದನು ತ್ರಾಣಂ ವಿಧತ್ತೇ ಪುನಃ
ಸೌಖ್ಯಾಪ್ತೀತರಹಾನಿಸಾಧನಮಲಂ ವಕ್ತಿ ಶ್ರುತೀರ್ವ್ಯಂಜಯನ್ ।
ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ ಕಲ್ಪಾವಸಾನೇ ಚ ಯ-
ಸ್ತಂ ದೇವಂ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಮ್ ॥ ೧ ॥

ಲಸತು ಶ್ರೀಮದಾನಂದತೀರ್ಥೇಂದುರ್ನೋ ಹೃದಂಬರೇ ।
ಯದ್ವಚಶ್ಚಂದ್ರಿಕಾ ಸ್ವಾಂತಸಂತಾಪಂ ವಿನಿಕೃಂತತಿ ॥ ೨ ॥

ಪದವಾಕ್ಯಪ್ರಮಾಣಜ್ಞಾನ್ ಪ್ರಣಮ್ಯ ಶಿರಸಾ ಗುರೂನ್ ।
ವ್ಯಾಕರಿಷ್ಯೇ ಯಥಾಬೋಧಂ ವಿಷ್ಣುತತ್ತ್ವವಿನಿರ್ಣಯಮ್ ॥ ೩ ॥

ಪರಿಚ್ಛೇದ - ೨ :

ಕಲತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ ।
ಶಿವಾದ್ಯಾಃ ಸೇವಕಾಸ್ತಸ್ಮೈ ನಮೋ ವಿಶ್ವಕುಟುಂಬಿನೇ ॥ ೧ ॥

ಪರಿಚ್ಛೇದ - ೩ :

ಜಗಜ್ಜನ್ಮಾದಿಕರ್ತಾರಂ ಸಮಸ್ತಗುಣಸಾಗರಮ್ ।
ಅವದ್ಯಗಂಧವಿಧುರಂ ಹರಿಂ ವಂದೇ ನಿರಂತರಮ್ ॥ ೧ ॥

ಅಂತ್ಯ ಶ್ಲೋಕಗಳು :

ಆನಂದಸಿಂಧವೇ ಪೂರ್ಣಪ್ರಜ್ಞಾಚಾರ್ಯಾಪ್ತಬಂಧವೇ ।
ನಮಃ ಶ್ರೀಹರಯೇ ಸ್ವಾಂತಧ್ವಾಂತೌಘತಿಮಿರಾರಯೇ ॥ ೧ ॥

ಮಯಾ ರಚಿತಯಾ ವಿಷ್ಣುತತ್ತ್ವನಿರ್ಣಯಟೀಕಯಾ ।
ಯತ್ಪುಣ್ಯಂ ಭಾವಿ ತತ್ಸರ್ವಮವಾಪ್ನೋತು ಗುರುರ್ಮಮ ॥ ೨ ॥

ಆನಂದತೀರ್ಥಭಗವದ್ವಚಸಾಂ ವಿಶಿಷ್ಟ-
ವ್ಯಾಖ್ಯಾನಕರ್ಮಣಿ ಸುರಾ ಅಧಿಕಾರಿಣೋಽತ್ರ ।
ಯಸ್ಮಾದೃಶೋಽಪಿ ಯತತೇ ತದತೀವ ಹಾಸ್ಯಂ
ಕಿಂ ನಾಮ ಭಕ್ತಿವಿವಶಸ್ಯ ವಿಭೂಷಣಂ ತತ್ ॥ ೩ ॥

*****

## ೧೯. ಪ್ರಮಾಣಪದ್ಧತಿ

ಆದಿಶ್ಲೋಕ :

ಪ್ರಣಮ್ಯ ಚರಣಾಂಭೋಜಯುಗಲಂ ಕಮಲಾಪತೇಃ ।
ಪ್ರಮಾಣಪದ್ಧತಿಂ ಕುರ್ಮೋ ಬಾಲಾನಾಂ ಬೋಧಸಿದ್ಧಯೇ ॥

ಅಂತ್ಯಶ್ಲೋಕ :

ಜಯತೀರ್ಥಮುನೀಂದ್ರೇಣ ಬಾಲಬೋಧಾಯ ನಿರ್ಮಿತಾ ।
ಪ್ರಮಾಣಪದ್ಧತಿರ್ಭೂಯಾತ್ ಪ್ರೀತ್ಯೈ ಮಾಧವಮಧ್ವಯೋಃ ॥

*****

## ೨೦. ವಾದಾವಲೀ

ಆದಿಶ್ಲೋಕ :

ನಮೋಽಗಣಿತಕಲ್ಯಾಣಗುಣಪೂರ್ಣಾಯ ವಿಷ್ಣವೇ ।
ಸತ್ಯಾಶೇಷಜಗಜ್ಜನ್ಮಪೂರ್ವಕರ್ತ್ರೇ ಮುರದ್ವಿಷೇ ॥

ಅಂತ್ಯಶ್ಲೋಕ :

ಜಯತೀರ್ಥಮುನೀಂದ್ರೇಣ ಬಾಲಬೋಧಾಯ ನಿರ್ಮಿತಮ್ ।
ವಾಙ್ಮುಖಾದ್ವಾಙ್ಮುಖಂ ಭೂಯಾತ್ ಪ್ರೀತ್ಯೈ ಮಾಧವಮಧ್ವಯೋಃ ॥

*****

## ೨೧. ಪದ್ಯಮಾಲಾ

ಆದಿಶ್ಲೋಕ :

ಪ್ರಣಮ್ಯ ಶ್ರೀಪತಿಂ ಸರ್ವಾನ್ ಗುರೂಂಶ್ಚಾಥ ಪ್ರವಕ್ಷ್ಯಹಮ್ ।
ಯಥಾಮತಿ ಹರೇಃ ಪೂಜಾವಿಧಿಂ ವೈಷ್ಣವಸಂಮತಮ್ ॥

ಅಂತ್ಯಶ್ಲೋಕಗಳು :

ಪದ್ಯಪಾಠೇ ಮನುಷ್ಯಾಣಾಂ ಶ್ರಮೋ ನಾತಿ ಭವೇದಿತಿ ।
ತಂತ್ರಸಾರೋಕ್ತಪೂಜಾಯಾಃ ಪದ್ಯಮಾಲೇಯಮೀರಿತಾ ॥
ಅನೇನ ಭಗವಾನ್ ವಿಷ್ಣುಃ ಪ್ರೀತೋ ಭವತು ಸರ್ವದಾ ।
ಪ್ರಮಾದತೋ ನಿರೋಧಾದ್ವಾ ಹರೇಃ ಪೂಜಾ ಭವೇನ್ನ ಚೇತ್ ।
ಪಠನಾತ್ ಪದ್ಯಮಾಲಾಯಾ ನರಃ ಪೂಜಾಫಲಂ ಲಭೇತ್ ॥

॥ ಶ್ರೀಕೃಷ್ಣಾರ್ಪಣಮಸ್ತು ॥

* * * * *

ಅಂತ್ಯ ಶ್ಲೋಕಗಳು :

ಆನಂದಸಿಂಧವೇ ಪೂರ್ಣಪ್ರಜ್ಞಾಚಾರ್ಯಾಪ್ತಬಂಧವೇ ।
ನಮಃ ಶ್ರೀಹರಯೇ ಸ್ವಾಂತಧ್ವಾಂತೌಘತಿಮಿರಾರಯೇ ॥ ೧ ॥

ಮಯಾ ರಚಿತಯಾ ವಿಷ್ಣುತತ್ತ್ವನಿರ್ಣಯಟೀಕಯಾ ।
ಯತ್ಪುಣ್ಯಂ ಭಾವಿ ತತ್ಸರ್ವಮವಾಪ್ನೋತು ಗುರುರ್ಮಮ ॥ ೨ ॥

ಆನಂದತೀರ್ಥಭಗವದ್ವಚಸಾಂ ವಿಶಿಷ್ಟ-
ವ್ಯಾಖ್ಯಾನಕರ್ಮಣಿ ಸುರಾ ಅಧಿಕಾರಿಣೋಽತ್ರ ।
ಯಸ್ಮಾದೃಶೋಽಪಿ ಯತತೇ ತದತೀವ ಹಾಸ್ಯಂ
ಕಿಂ ನಾಮ ಭಕ್ತಿವಿವಶಸ್ಯ ವಿಭೂಷಣಂ ತತ್ ॥ ೩ ॥

*****

## ೧೯. ಪ್ರಮಾಣಪದ್ಧತಿ

ಆದಿಶ್ಲೋಕ :

ಪ್ರಣಮ್ಯ ಚರಣಾಂಭೋಜಯುಗಲಂ ಕಮಲಾಪತೇಃ ।
ಪ್ರಮಾಣಪದ್ಧತಿಂ ಕುರ್ಮೋ ಬಾಲಾನಾಂ ಬೋಧಸಿದ್ಧಯೇ ॥

ಅಂತ್ಯಶ್ಲೋಕ :

ಜಯತೀರ್ಥಮುನೀಂದ್ರೇಣ ಬಾಲಬೋಧಾಯ ನಿರ್ಮಿತಾ ।
ಪ್ರಮಾಣಪದ್ಧತಿರ್ಭೂಯಾತ್ ಪ್ರೀತ್ಯೈ ಮಾಧವಮಧ್ವಯೋಃ ॥

*****

## ೨೦. ವಾದಾವಲೀ

ಆದಿಶ್ಲೋಕ :

ನಮೋಽಗಣಿತಕಲ್ಯಾಣಗುಣಪೂರ್ಣಾಯ ವಿಷ್ಣವೇ ।
ಸತ್ಯಾಶೇಷಜಗಜ್ಜನ್ಮಪೂರ್ವಕರ್ತ್ರೇ ಮುರದ್ವಿಷೇ ॥

ಅಂತ್ಯಶ್ಲೋಕ :

ಜಯತೀರ್ಥಮುನೀಂದ್ರೇಣ ಬಾಲಬೋಧಾಯ ನಿರ್ಮಿತಮ್ ।
ವಾಙ್ಮುಖಾದ್ವಾಙ್ಮುಖಂ ಭೂಯಾತ್ ಪ್ರೀತ್ಯೈ ಮಾಧವಮಧ್ವಯೋಃ ॥

*****

## ೨೧. ಪದ್ಯಮಾಲಾ

ಆದಿಶ್ಲೋಕ :

ಪ್ರಣಮ್ಯ ಶ್ರೀಪತಿಂ ಸರ್ವಾನ್ ಗುರೂಂಶ್ಚಾಥ ಪ್ರವಕ್ಷ್ಯಹಮ್ ।
ಯಥಾಮತಿ ಹರೇಃ ಪೂಜಾವಿಧಿಂ ವೈಷ್ಣವಸಂಮತಮ್ ॥

ಅಂತ್ಯಶ್ಲೋಕಗಳು :

ಪದ್ಯಪಾಠೇ ಮನುಷ್ಯಾಣಾಂ ಶ್ರಮೋ ನಾತಿ ಭವೇದಿತಿ ।
ತಂತ್ರಸಾರೋಕ್ತಪೂಜಾಯಾಃ ಪದ್ಯಮಾಲೇಯಮೀರಿತಾ ॥
ಅನೇನ ಭಗವಾನ್ ವಿಷ್ಣುಃ ಪ್ರೀತೋ ಭವತು ಸರ್ವದಾ ।
ಪ್ರಮಾದತೋ ನಿರೋಧಾದ್ವಾ ಹರೇಃ ಪೂಜಾ ಭವೇನ್ನ ಚೇತ್ ।
ಪಠನಾತ್ ಪದ್ಯಮಾಲಾಯಾ ನರಃ ಪೂಜಾಫಲಂ ಲಭೇತ್ ॥

॥ ಶ್ರೀಕೃಷ್ಣಾರ್ಪಣಮಸ್ತು ॥

* * * * *

# ಶ್ರೀಜಯತೀರ್ಥರ ಸ್ತೋತ್ರಗಳು

## ೧. ಅಣುಜಯತೀರ್ಥವಿಜಯಃ

ನತ್ವಾ ಕೃಷ್ಣಂ ತಥಾ ಮಧ್ವಂ ಜಯತೀರ್ಥಗುರೂನಪಿ ।
ವಕ್ಷ್ಯೇ ಶ್ರೀಮಜ್ಜಯಾರ್ಯಾಣಾಂ ಸ್ತೋತ್ರಂ ಸರ್ವಸಮೃದ್ಧಿದಮ್ ॥ ೧ ॥

ಶ್ರೀಮಾನಿಂದ್ರಃ ಸುಧೀಮಾನ್ ಗಿರಿಶಮುಖಸುರೈಃ ಪ್ರಾರ್ಥ್ಯಮಾನಂ ಸುಶಾಸ್ತ್ರಂ
ಶ್ರೋತುಂ ತ್ವೇಕಾಗ್ರ್ಯಬುದ್ಧ್ಯಾ ವೃಷಭತನುರಭೂಚ್ಛ್ರೀಮದಾನಂದತೀರ್ಥಾತ್ ।
ಧೃತ್ವಾ ತಚ್ಛಾಸ್ತ್ರಭಾರಂ ಪ್ರತಿದಿನಮಶೃಣೋದ್ವ್ಯಾಚ್ಯಮಾನಂ ಸುಶಾಸ್ತ್ರಂ
ಪ್ರಾಂತೇಽಸೌ ಸೂಪವಿಶ್ಯ ದ್ವಿಜಗಣಸಹಿತೋ ಗ್ರಂಥಭಾವಂ ದಧಾನಃ ॥ ೨ ॥

ಶೇಷಾದೀನಾಮಗಮ್ಯಂ ತವ ಮುಖಜನಿತಂ ಶಾಸ್ತ್ರಮಾಲೋಡ್ಯ ಕೇ ವಾ
ವ್ಯಾಖ್ಯಾಸ್ಯಂತೀತಿ ಪೃಷ್ಟಃ ಸುಖಮುನಿರವದತ್ ಸುಸ್ಮಿತಾಸ್ಯೋಽಥ ಶಿಷ್ಯೈಃ ।
ವ್ಯಾಖ್ಯಾಸ್ಯತ್ಯೇಷ ಗೋರಾಡಿತಿ ಕುಪಿತತರಾ ಶಿಷ್ಯಕಾಃ ಶೇಪುರೇನಂ
ಗೋರಾಜೋಽಸಾವಯೋಗ್ಯಃ ಪ್ರವಚನಸಮಯೇ ಸರ್ಪದಷ್ಟೋ ಮ್ರಿಯೇತ ॥ ೩ ॥

ಇತ್ಥಂ ಶಪ್ತಂ ಸ್ವಶಿಷ್ಯೈರ್ವೃಷಭತನುಮಸೌ ಶ್ರೀಪತಿಃ ಕ್ಷೇಮದೋಽಯಂ
ದತ್ವಾ ಶಾಪಸ್ಯ ಮೋಕ್ಷಂ ಪ್ರವಚನಸಮಯೇ ದ್ವಾದಶಸ್ತೋತ್ರಪಾಠಮ್ ।
ದೃಷ್ಟ್ವಾ ತಂ ತಸ್ಯ ವಕ್ತ್ರೇ ಪ್ರಕಟಯದನಿಲಾಂಶೋ ಯತೀಂದ್ರೋಽತಿವಾಗ್ಮೀ
ಮಧ್ವೋ ಮಾನ್ಯಾರ್ಥವಾಕ್ಯೋ ಮಧುಮಥನಪದಂ ಮಾನಸೇ ಮಾನಯಾನಃ ॥ ೪ ॥

ಭೂತ್ವಾ ಸಾದೀಶಗೇಹೇ ಪ್ರಕಟಯಿತುಮಸೌ ಸೂಕ್ಷ್ಮರೂಪಾಂ ಸ್ವಬುದ್ಧಿಂ
ಜಾತೇ ವಿದ್ವದ್ಗೃಹೇ ನ ಪ್ರಭವತಿ ನಿಜಸದ್ಬುದ್ಧಿಕೀರ್ತಿಪ್ರಕಾಶಃ ।
ನಿತ್ಯಾಭ್ಯಾಸಾತ್ ಸ್ವಭಾವಾದತಿವಿತತಮತಿಃ ಸಾತಿಚಾತುರ್ಯದಕ್ಷೋ
ಭೂತ್ವಾ ಯಜ್ಞೋಪವೀತೀ ಪಿತೃಕೃತಶುಭವೈವಾಹಿಕೋ ನಾಸ್ಪೃಶತ್ ತಾಮ್ ॥ ೫ ॥

ಶ್ರೀಮಾನಕ್ಷೋಭ್ಯತೀರ್ಥೋ ಯತಿವರತಿಲಕೋ ಭೀಮರಥ್ಯಾಂ ಹಿ ರಾಮ-
ಶ್ರೀಮತ್ಪೂಜಾಧಿಕಾರೇ ರಘುಪತಿಸುಪದಂ ಮಾನಸೇ ಚಿಂತಯನ್ ಸಃ ।
ಆಸೀತ್ ಕಾಲೇ ತದೈವಾಖಿಲಹಯಪತಿಭಿಃ ಸಂವೃತಃ ಸಾದಿಭೂಪೋ
ಭಾನೌ ಮಧ್ಯಸ್ಥಿತೇ ಚಾಗಮದಿಹ ಮೃಗಯಾಮಾಚರನ್ ಕಂ ಪಿಪಾಸುಃ ॥ ೬ ॥

ಚಾತುರ್ಯಂ ಸಾದಿರಾಜ್ಞಾಂ ಪ್ರಕಟಯಿತುಮಸಾವಶ್ವಸಂಸ್ಥೋಽಪಿಬತ್ ಕಂ
ಪಶ್ಯತ್ಯಕ್ಷೋಭ್ಯತೀರ್ಥೇ ಹ್ಯವದದಮುಮಸೌ ಕಿಂ ಪಶುಃ ಪೂರ್ವದೇಹೇ ।

ಇತ್ಯುಕ್ತಃ ಸಾದಿಭೂಪೋ ಗುರುವರಯತಿನಾ ಸೋಽಸ್ಮರದ್ಗೋಪತಿತ್ವಂ
ಸಾದೀಶತ್ವಂ ವಿಸೃಜ್ಯ ಪ್ರಣತಿಮಕುರುತಾಂತ್ಯಾಶ್ರಮಾಕಾಂಕ್ಷಯಾಽಸೌ ॥ ೭ ॥

ಜ್ಞಾತ್ವಾ ವಾಂಛಾಂ ತದೀಯಾಂ ಗುರುರವದದಮುಂ ಸಂಪದಸ್ತ್ವಂ ವಿಸೃಜ್ಯ
ಪ್ರಾಪ್ಸ್ಯೋಷ್ಯಂತ್ಯಾಶ್ರಮಂ ಯದ್ಯಥ ಸುತವಿರಹಾತ್ ತ್ವತ್ಪಿತಾ ಮಾಂ ಹನಿಷ್ಯೇತ್ ।
ಇತ್ಯುಕ್ತಃ ಸೋಽಯಮೂಚೇ ಮಮ ಯದಿ ಜನಕೋ ಹಂತುಕಾಮೋಽಭ್ಯಯಾತ್ ತ್ವಾಂ
ವಕ್ಷ್ಯೇಽಹಂ ಸ್ವೇಚ್ಛಯೈವಾಶ್ರಮವರಮಲಭಂ ಕಿಂ ಬಲೇನೇತಿ ಸೋಽದಾತ್ ॥ ೮ ॥

ಇತ್ಥಂ ಸಾದೀಶ್ವರೋಕ್ತೋ ರಘುಪತಿಭಜನೇ ಯೋಗ್ಯ ಇತ್ಯೇವ ಬುದ್ಧಿಂ
ಕೃತ್ವಾ ಪ್ರಾದಾದ್ಯತಿತ್ವಂ ಗುರುವಚನಮಸೌ ಸಂಸ್ಮರನ್ ಯೋಗಿವರ್ಯಃ ।
ಶಾಸ್ತ್ರಂ ಯದ್ವಕ್ತ್ರಪದ್ಮೋದ್ಗಲಿತಮಶೃಣುಯಾದ್ಯೋ ಜಯೇತ್ ಸರ್ವವಾದೀ-
ನಿತ್ಥಂ ಕಾಲತ್ರಯಜ್ಞೋ ವ್ಯಧಿತ ಜಯಸುತೀರ್ಥೇತಿ ಸಂಜ್ಞಾಂ ಸ ತಸ್ಯ ॥ ೯ ॥

ಕಾಲೇ ತಸ್ಮಿನ್ ಪಿತಾಽಸ್ಯ ಸ್ವತನಯಮಶೃಣೋದ್ದಂಸವೇಷಂ ದಧಾನಂ
ಕೋಪಾತ್ ಸಂಹರ್ತುಮಿಚ್ಛನ್ ಯತಿವರತಿಲಕಂ ಸೇನಯಾಽಗಾಚ್ಛುಚಾಽಽರ್ತಃ ।
ಗತ್ವಾ ಕೋಪಾದ್ಯತೀಂದ್ರಂ ತನಯಮನಯಕೃದ್ರಾಜ್ಯಹೀನಂ ತ್ವಕಾರ್ಷೀ-
ರ್ಭಾರ್ಯಾಹೀನಂ ಯತೀಂದ್ರೇತ್ಯವದದಮುಮಸೌ ಶೋಕಮೋಹಾದಜಾನನ್ ॥೧೦॥

ಇತ್ಯುಕ್ತೋ ಹಂಸರಾಜೋ ಯದಿ ತವ ತನಯೇ ಸ್ನೇಹಪಾಶೋಽಸ್ತಿ ತಂ ದ್ರಾ-
ಗ್ಗೇಹಂ ಸಂಯಾಪಯೇತ್ಥಂ ಹ್ಯವದದಮುಮಸೌ ಸ್ನೇಹಪಾಶಾನ್ನಿನಾಯ ।
ನೀತ್ವಾ ಪುತ್ರಂ ಸ ಹರ್ಷಾದಥ ಸುರತಗೃಹಂ ರಮ್ಯಮಾವೇಶಯಿತ್ವಾ
ಭಾರ್ಯಾಂ ತಸ್ಯಾದಿಶತ್ ಸಾ ಯತಿನಿಕಟಮಗಾತ್ ಕಾಮಬಾಣೇನ ಚಾರ್ತಾ ॥ ೧೧ ॥

ತಪ್ತಾ ತತ್ಕಾಂತಿಪುಂಜಾದ್ಯತಿವರತಿಲಕಂ ವೀಕ್ಷಿತುಂ ನಾಶಕತ್ ಸಾ
ಪ್ರಾಪೋಚದ್ಬಂಧುವರ್ಗಂ ಯತಿವರತಿಲಕಂ ವೀಕ್ಷಿತುಂ ನಾಸ್ಮಿ ಶಕ್ತಾ ।
ಬಂಧೂಕ್ತಃ ಸಾದಿಭೂಪೋ ಯತಿವರನಿಕಟೇ ಪುತ್ರಮಾನೀಯ ನಾಯಂ
ಯೋಗ್ಯಃ ಸಂಘರ್ಷಣಾರ್ಥಂ ತ್ವಿತಿ ನಿಗದಿತವಾನ್ ಹಂಸರಾಜಂ ಸ ಭೂಪಃ ॥ ೧೨ ॥

ದೃಷ್ಟ್ವಾ ತಾತಂ ಶುಚಾಽಽರ್ತಂ ನಿಜಜನಸಹಿತಂ ಪ್ರಾವದತ್ ಸ್ವೇಚ್ಛಯೇತ್ಥಂ
ಯಾಙ್ಞ್ಯಾಪೂರ್ವಂ ಮಯಾಽಽಪ್ತಂ ಯತಿವರತಿಲಕಃ ಕಿಂ ನಿಮಿತ್ತಂ ಯತಿತ್ವೇ ।
ತಸ್ಮಾತ್ ತಾನ್ ಪ್ರಾರ್ಥಯಿತ್ವಾ ಹರಿಭಜನರತಃ ಸರ್ವದಾಽನ್ಯಂ ಕನಿಷ್ಠಂ
ಪುತ್ರಂ ದೃಷ್ಟ್ವಾ ಶುಚಸ್ತ್ವಂ ಜಹಿ ಸುಜನರತಃ ಪುತ್ರವತ್ ತಾನ್ ಪ್ರಯಾಹಿ ॥ ೧೩ ॥

ಇತ್ಯಾದ್ಯೈಃ ಸಾಂತ್ವವಾಕ್ಯೈಃ ಪ್ರಶಮಿತಸುಮನಾಃ ಸ್ವಾಲಯಂ ಸೇನಯಾಽಗಾ-
ದ್ದಂಸೋ ಗುರ್ವಾಜ್ಞಯಾಽಗಾತ್ ಸಕಲಸುಜನತಾಂ ಪಾವಯನ್ ದರ್ಶನಾದ್ಯೈಃ ।

ದುರ್ವಾದೀನ್ ದ್ರಾಗ್ವಚೋಭಿಸ್ತ್ವಜಯದಖಿಲಭೂಮಂಡಲೇ ಸಂಸ್ಥಿತಾಂಸ್ತಾನ್
ವಿಷ್ಣೋಃ ಸರ್ವೋತ್ತಮತ್ವಂ ಶ್ರುತಿಗಣಸಹಿತೈಃ ಸಾಧಯಂಶ್ಚಾಪಿ ತರ್ಕೈಃ ॥ ೧೪ ॥

ಏವಂ ಜಿತ್ವಾ ಕುವಾದೀನಗಮದಿಹ ಗುರುಃ ಶ್ರೀಮದಕ್ಷೋಭ್ಯತೀರ್ಥ-
ಪ್ರಾಂತಂ ಮಧ್ವಾಗಮಾಂಸ್ತು ಪ್ರತಿದಿನಮಶ್ರುಣೋದ್ಭಕ್ತಿನಮ್ರಸ್ತದಂತೇ ।
ಏವಂ ಕಾಲೇ ವ್ಯತೀತೇ ನಿಖಿಲಮಧಿಗತಂ ಸ್ಥಾನಮಸ್ಮೈ ಪ್ರದಾಯ
ಪ್ರಾಯಾದ್ವಿಷ್ಣೋಃ ಸಮೀಪಂ ಸಕಲಸುರಗಣೈರ್ಮಾನಯಾನಃ ಸದಾಽಽಸ್ತೇ ॥ ೧೫ ॥

ಏವಂ ಪ್ರಾಪ್ತೇ ಗುರುತ್ವೇ ಹರಿಚರಣಯುಗಂ ಹಂಸರಾಜೋ ವಿಚಿಂತ್ಯ
ಪ್ರಾಯಾದ್ದುರ್ಗಾಲಯಂ ಚ ಪ್ರತಿದಿನಮಕರೋದ್ಬುದ್ಧಿಮಾನ್ ಸತ್ತಪೋಽಗ್ರ್ಯಮ್ ।
ದುರ್ಗಾ ತಸ್ಮಾತ್ ಪ್ರಸನ್ನಾ ಹ್ಯವದದತಿತರಾಂ ಭಕ್ತಿನಮ್ರಂ ಯತೀಂದ್ರಂ
ವಾಂಛಾ ಕಸ್ಮಿನ್ ಯತೀಂದ್ರೇತ್ಯವದದಿತಿ ಯತಿರ್ದೇಹಿ ಪೂಗಂ ಚ ಘಂಟಾಮ್ ॥ ೧೬ ॥

ಘಂಟಾಂ ಪೂಗೀಫಲಂ ಚೇತ್ಯುಭಯಮಪಿ ತತಃ ಪ್ರಾಪ್ಯ ಮಧ್ವಾಗಮಾಂಸ್ತು
ವ್ಯಾಕುರ್ವನ್ ಗ್ರಾಮಮೇಕಂ ಯರಗುಲ ಇತಿ ಚಾಖ್ಯಾಯುತಂ ಪ್ರಾಪ್ಯ ಶೈಲಮ್ ।
ತತ್ರಾಂತಸ್ಥೋಽಥ ದರ್ಯಾಂ ರಘುಪತಿಮನಿಶಂ ಪೂಜಯನ್ನಂಬುಪತ್ರೈ-
ರನ್ನಾಚ್ಛಿಷ್ಯೋಪನೀತಾದ್ಯತಿವರತಿಲಕೋ ಯಾವನಾಳಾದುವಾಸ ॥ ೧೭ ॥

ಏವಂ ವತ್ಸನ್ ಗುಹಾಯಾಂ ಪ್ರಕರಣದಶಕಂ ಸಾಧುವಾಕ್ಯೈರ್ವಿವಿಚ್ಯ
ಭಾಷ್ಯಂ ವ್ಯಾಖ್ಯಾಂ ತಥಾಽನು ಪ್ರಶಮಿತಕುಮತಾಂ ವ್ಯಾಕರೋಚ್ಛ್ರೀಜಯಾರ್ಯಃ ।
ತಾತ್ಪರ್ಯಂ ಗೀತಿಕಾಯಾಃ ಸುವಿವೃತಮಕರೋತ್ ತತ್ರಶಸ್ತಂ ಚ ಭಾಷ್ಯಂ
ಋಗ್ಭಾಷ್ಯಂ ವ್ಯಾಕರೋದ್ಯೋ ವಿವರಣಮಥ ಸನ್ನ್ಯಾಯಸದ್ವಿಸ್ತೃತೇಸ್ತು ॥ ೧೮ ॥

ಈಶಾವಾಸ್ಯಸ್ಯ ಭಾಷ್ಯಂ ಪ್ರವಿತತಸುಮನಾಃ ಪ್ರಶ್ನಷಟ್ಕಸ್ಯ ಭಾಷ್ಯಂ
ವ್ಯಾಚಷ್ಟೇ ಸದ್ವಚೋಭಿಃ ಪ್ರಶಮಿತಕುಮತಃ ಶ್ರೀಜಯಾರ್ಯೋ ರರಾಜ ।
ಏವಂ ಮಧ್ವಾಗಮಾನಾಂ ಪ್ರವಚನಮಕರೋತ್ ಶ್ರೀಪತಿಪ್ರೇಷ್ಠವರ್ಯೋ
ದುರ್ವಾದೀನ್ ಮಾಯಿಮುಖ್ಯಾನಜಯದನು ಪರಾನ್ ಸಂಸ್ಥಿತಾನಗ್ರ್ಯಬುದ್ಧಿಃ ॥ ೧೯ ॥

ಕೀರ್ತಿಂ ತೇಷಾಮಮರ್ಷನ್ ಪ್ರವಚನಚತುರೈಃ ಶಿಷ್ಯತಚ್ಛಿಷ್ಯಸಂಘೈಃ
ಸಾಕಂ ನಾಗೇಂದ್ರಸಂಸ್ಥೋಽಖಿಲನಿಗಮತತೇರ್ಭಾವಸಂದರ್ಶನೇನ ।
ಪ್ರಾಜ್ಞಂಮನ್ಯೋಽತಿಗರ್ವೀ ಪ್ರವಚನಚತುರಂ ಶ್ರೀಜಯಾರ್ಯಂ ವಿಜೇತುಂ
ವಿದ್ಯಾರಣ್ಯಾಖ್ಯವಾದೀ ಸಮಗಮದಿವ ಸತ್ಪಂಚವಕ್ತ್ರಂ ಶೃಗಾಲಃ ॥ ೨೦ ॥

ದೃಷ್ಟ್ವಾ ಪ್ರಾಪ್ತಂ ಕುವಾದಂ ಯತಿವರತಿಲಕೋ ಮಾನಸಲ್ಲಕ್ಷಣಸ್ಥಂ
ವಾಕ್ಯಂ ತ್ವೇಕಂ ಪ್ರದರ್ಶ್ಯಾವದದಿತಿ ಕಥಯಾಸ್ಯಾರ್ಥತತ್ಸಂಗತೀ ಚ ।

ವಿದ್ಯಾರಣ್ಯಸ್ತಥೋಕ್ತಃ ಪ್ರವಚನಚತುರಃ ಸಂವಿಚಾರ್ಯಾನುಪೂರ್ವಂ
ದುಃಶಕ್ಯಂ ಚೇತಿ ಮತ್ವಾ ಪ್ರವದದತಿಕುವಾಗ್ಜಾಲವಾಕ್ಯೇನ ಕಿಂ ಮೇ ॥ ೨೧ ॥

ಇತ್ಯುಕ್ತೋ ಹಂಸರಾಜೋಽಪ್ಯತಿಕುಪಿತತರೋ ಬಾಲಬುದ್ಧಿಸ್ತ್ವಮೇವೇ-
ತ್ಯುಕ್ತ್ವಾ ವಾಕ್ಯಂ ಸ್ವಜನ್ಯಾಮವದದತಿತರಾಂ ಸಂಗತಿಂ ಚಾನಯೋಸ್ತು ।
ಪ್ರುತ್ವಾ ತಾಂ ಲಜ್ಜಿತೇಽಮುಂ ಪ್ರವಚನಚತುರಂ ಸ್ತೋತ್ರದಂಡಪ್ರಣಾಮೈ-
ರ್ನಾಗೇಂದ್ರಂ ಚಾಧಿರೂಢಂ ದ್ವಿಜಗಣಸಹಿತೋಽಚಾರಯದ್ವಾದ್ಯಸಂಘೈಃ ॥ ೨೨ ॥

ಇತ್ಯಾದ್ಯೈಶ್ಚಿತ್ರಚರ್ಯೈರ್ಯತಿವರಮಸಹನ್ ಸರ್ವದಿಕ್ಷು ಪ್ರಸಿದ್ಧೋ
ವಾದೀಂದ್ರೋ ವಾದಿಶೂರೋ ವಿಧೃತಜಯಪಟಃ ಶೀಘ್ರಮಾಯಾದ್ವಿಜೇತುಮ್ ।
ಸಂಪ್ರಾಪ್ತಂ ತಂ ಸ್ವಶಿಷ್ಯೈರ್ಬಹುಭಿರಮಲಧೀರೈಕ್ಯವಾದೋ ನ ಸಿದ್ಧೋ
ಮಾನಾಭಾವಾದಿತಿ ದ್ರಾಗವದದಮುಮಸೌ ಮಾನ್ಯಲೋಕೈಶ್ಚ ಮಾನ್ಯಃ ॥ ೨೩ ॥

ಇತ್ಯಾಕ್ಷಿಪ್ತೋಽಭಿಮಾನೀ ಹ್ಯವದದಮುಮಸೌ ತತ್ತ್ವತೋ ನೈವ ಭಿನ್ನಾ
ಹ್ಯಾತ್ಮತ್ವಾದಾತ್ಮನೋಽನ್ಯೇ ನಿಖಿಲವಿಧುರವಚ್ಚೇತಿ ಮಾನಂ ತ್ವಭೇದೇ ।
ಇತ್ಥಂ ಚೋಕ್ತೋಽಮುನಾಽಸೌ ಹ್ಯವದದತಿಬಲಂ ದೂಷಣಂ ಬಾಧಸಂಜ್ಞಂ
ಸಿದ್ಧತ್ವಾತ್ ಸದ್ಭಿದಾಯಾಃ ಶ್ರುತಿಶತವಚನೈರ್ದ್ವಾಸುಪರ್ಣಾದಿರೂಪೈಃ ॥ ೨೪ ॥

ಐಕ್ಯಂ ಬ್ರಹ್ಮಸ್ಥವಾಕ್ಯೈರ್ಬಹುಭಿರಪಿ ದೃಢಂ ತತ್ತ್ವಮಸ್ಯಾದಿರೂಪೈ-
ರಿತ್ಥಂ ನಾಶಂಕನೀಯಂ ಸದೃಶಗುಣವಶಾತ್ ಸಿಂಹಶಬ್ದೋ ಯಥಾಽಗ್ನೌ ।
ಏವಂ ನಾಂಗೀಕರೋಷಿ ಶ್ರುತಿತತಿರಭವಚ್ಚಾಪ್ರಮಾಣಂ ವಿರೋಧಾ-
ದನ್ಯೋನ್ಯಂ ನೈವ ಭೇದಶ್ರುತಿರಪಿ ಬಹುಧಾ ಸಾವಕಾಶಾ ಸ್ಫುಟತ್ವಾತ್ ॥ ೨೫ ॥

ಯದ್ಯೇವಂ ಬಾಧಿತಾರ್ಥಂ ಶ್ರುತಿತತಿರವದಚ್ಛ್ರೌತವಾಕ್ಯಾವಿಶೇಷಾತ್
ಸತ್ಯಂ ಜ್ಞಾನೇತಿ ವಾಕ್ಯಂ ಪ್ರಕೃತಿಪರಪರಂ ಬಾಧಿತಾರ್ಥಂ ವದೇತ ।
ಅಸ್ತ್ವಿತ್ಯೇವಂ ವದೇಥಾಃ ಪ್ರಕೃತಿಪರಪರಂ ಪ್ರಾಪ್ಯ ಮುಕ್ತಿರ್ನರಾರ್ಥ್ಯಾ
ನ ಸ್ಯಾದ್ವೈಕಲ್ಯದೋಷಾಚ್ಛ್ರುತಿತತಿವಿಹಿತಸ್ಯಾರ್ಥಬಾಧೋ ನ ಚಾಸ್ತಿ ॥ ೨೬ ॥

ಗೀತಾಯಾಂ ದರ್ಶಿತತ್ವಾತ್ ಸಕಲನಿಗಮವಾಙ್ನಿರ್ಣಯಾರ್ಥಂ ಪ್ರವೃತ್ತೇ
ಸೂತ್ರೇ ಸಂದರ್ಶಿತತ್ವಾಚ್ಛ್ರುತಿತತಿವಿಹಿತೋ ಬಾಧಿತೋ ನೈವ ಭೇದಃ ।
ಇತ್ಥಂ ತದ್ಬಾಧಿತೈಕ್ಯಂ ಪ್ರಕಥಯಸಿ ತದಾ ದೂಷಣೈರಪ್ಯಸಂಖ್ಯೈ-
ರ್ದುಷ್ಟೋಽಸೀತ್ಥಂ ನಿರುದ್ಧೋ ವಿಗತಮುಖರಸೋಽವಾಙ್ಮುಖೋಽಗಾನ್ನಿಶಾಯಾಮ್ ೨೭

ಕೀರ್ತಿಂ ತತ್ಸಾಧಿತಾಂ ತಾಂ ಬಹುವಿಜಯಭವಾಂ ಕಾಲತೋ ನಾಲ್ಪತೋಽಸೌ
ಪ್ರಾಪ್ತಃ ಕಾಲಾಲ್ಪತೋಽಯಂ ಸಕಲದಿಶಿಗತಾಂ ಕೀರ್ತಿಮಾಪಾನವದ್ಯಾಮ್ ।

ಕೀರ್ತಿಂ ತಾಂ ವಿದ್ವದಾಢ್ಯಾಃ ಪರಿಹೃತವಿಜಯಂ ವಾದಿಭೂಪಂ ನಿಶಮ್ಯ
ಕ್ಷುಬ್ಧಾಃ ಸಂತ್ರಸ್ತಗಾತ್ರಾ ವಿಸೃಜಿತಶಿಬಿಕಾ ನೈವ ಚೇಲುಃ ಸ್ವದೇಶಾತ್ ॥ ೨೮ ॥

ಸ್ನಾತ್ವಾ ಕಾಲೇಽಬ್ಜಜಸ್ಯ ಪ್ರಣವಪರಮನುಂ ತ್ವನ್ಯಮಂತ್ರಾಂಶ್ಚ ಜಪ್ತ್ವಾ
ಮಂತ್ರಾರ್ಘ್ಯಂ ಜಾನು ದತ್ವಾ ಹರಿಶಿರಸಿಗತಂ ಪುಷ್ಪಮಾಲಾದಿ ಮಾರ್ಷ್ಟಿ ।
ಸರ್ವೇಷಾಂ ವ್ಯಾಸರೂಪಾಣ್ಯಮಿತಪದತತಿಂ ದರ್ಶಯಿತ್ವಾ ಮಠಂ ದ್ರಾಗ್
ಗತ್ವಾ ದೇವಸ್ಯ ಪೂಜಾಂ ಪ್ರಶಮಿತಮನಸಾ ಸಾಧು ಕೃತ್ವಾ ನನಾಮ ॥ ೨೯ ॥

ತೀರ್ಥಂ ಸೇವ್ಯಾಗತಾನಾಮಪಿ ಪರಮಮತಿಃ ಶ್ರಾವಯಿತ್ವಾ ಮನುಂ ದ್ರಾಕ್
ತಪ್ತೇ ಮುದ್ರೇ ಪ್ರದಾಯ ಪ್ರವಚನಮಕರೋಚ್ಛಿಷ್ಯಜಾಲಂ ಪ್ರಹರ್ಷನ್ ।
ಪಶ್ಚಾತ್ ಸ್ನಾನಂ ವಿಧಾಯ ತ್ವಮಲಗುಣಗಣಂ ಪೂಜಯಿತ್ವಾ ದ್ವಿಜೇಂದ್ರೈಃ
ಸಾಕಂ ಭುಕ್ತ್ವಾ ಪ್ರಸಾದಂ ಪುನರಪಿ ಕೃತವಾನ್ ಸ್ನಾನಪೂಜೇ ನಮಶ್ಚ ॥ ೩೦ ॥

ಪಶ್ಚಾತ್ ತತ್ತ್ವಪ್ರಸಂಗಂ ಪ್ರವಿತತಮನಸಾ ಸಾಧುಭಿಃ ಸಾಧು ಕೃತ್ವಾ
ಧ್ಯಾಯನ್ ವಿಷ್ಣೋರ್ಗುಣಾಂಸ್ತಾನಮಲಹೃದಯತೋ ರಾತ್ರಿಶೇಷಂ ನಿನಾಯ ।
ಏವಂ ಕಾಲಂ ನಯನ್ ಸಃ ಸಕಲಭುವಿಗತಂ ತೀರ್ಥಜಾಲಂ ನಿಷೇವ್ಯ
ತತ್ತದ್ರಾಷ್ಟ್ರಸ್ಥವಾದೀನಜಯದನುದಿನಂ ಜಂಬುಕಾನ್ ಸಿಂಹವಚ್ಚ ॥ ೩೧ ॥

ಸರ್ವಾನ್ ಜಿತ್ವಾ ಕುವಾದೀನಮಲಚರಣಯೋಃ ಪತ್ರಜಾಲಂ ಜಯಸ್ಯ
ಶ್ರೀಕಾಂತಸ್ಯಾರ್ಪಯಿತ್ವಾ ಸ್ವಗುರುಪರಮವೃಂದಾವನಂ ವಂದಿತಂ ದ್ರಾಕ್ ।
ಸ್ನಾತ್ವಾ ಕಾಶ್ಯಾಂ ತ್ರಿವೇಣ್ಯಾಮವನಿಸುರಗಣೈಃ ಸಂಯುತಸ್ತೈರ್ವಿಚಾರ್ಯ
ಪ್ರಾದಾತ್ ತುರ್ಯಾಶ್ರಮಂ ಸಂಪರಿಹೃತವಿಷಯಾಯಾಶು ವಿಪ್ರೋತ್ತಮಾಯ ॥೩೨ ॥

ಕೃತ್ವಾ ತಸ್ಯಾಭಿಷೇಕಂ ರಘುಪತಿಭಜನೇ ಸ್ವಸ್ಯ ಸಂಸ್ಥಾನಮಸ್ಮೈ
ಪ್ರಾದಾದ್ವಿದ್ಯಾಧಿರಾಜೇತ್ಯಮುಮಮಲಮತಿಂ ಘೋಷಯಾಮಾಸ ದಿಕ್ಷು ।
ಯುಕ್ತ್ಯಾ ಸಂಶಿಕ್ಷಯಂಸ್ತಂ ಪ್ರವಚನಚತುರಂ ವಾದಿಜೇತಾರಮಗ್ರ್ಯಂ
ಕೃತ್ವಾ ತಂ ದಿಗ್ಜಯಾರ್ಥಂ ಪರಮಗುಣನಿಧಿಂ ಪ್ರಾರ್ಥಯಾಮಾಸ ವಿಷ್ಣುಮ್ ॥ ೩೩ ॥

ಚಿತ್ರಂ ಶ್ರೀಮಜ್ಜಯಾರ್ಯೈಃ ಕೃತಮತಿವಿಶದಂ ವಿಕ್ರಮಂ ಕೋ ನು ವಕ್ತಾ
ಕಿಂ ತು ಸ್ಮೃತ್ಯರ್ಥಮಲ್ಪಂ ಗುರುಭಿರನುದಿನಂ ವರ್ಣಿತುಂ ವರ್ಣಿತಂ ಮೇ ।
ತೇನ ಶ್ರೀಮಧ್ವನಾಥೋ ಯದುಕುಲತಿಲಕೋ ಮಾಧವೋ ಮಾನಸಿದ್ಧೋ
ಭೂಯಾತ್ ಪ್ರೀತಃ ಸಮಸ್ತಾ ಅಪಿ ಗುರುಗುರವಃ ಪ್ರೀತಿಯುಕ್ತಾ ಭವಂತು ॥ ೩೪ ॥

॥ ಇತಿ ಶ್ರೀವ್ಯಾಸತೀರ್ಥಕೃತಶ್ರೀಜಯತೀರ್ಥಸ್ತೋತ್ರಮ್(ಅಣುಜಯತೀರ್ಥವಿಜಯಃ) ॥

*****

# ೨. ಶ್ರೀಜಯತೀರ್ಥಪ್ರಶಂಸನಮ್

ಮಾಧ್ವಗ್ರಂಥಾನ್ ಸ್ವಬಂಧೂನಿವ ಸರಸಹೃದಾಽಽಲಿಂಗ್ಯ ವಿಜ್ಞಾತಭಾವಃ
ಸಂಯೋಜ್ಯಾಲಂಕೃತಾಭಿಃ ಸ್ವಸಹಜಮತಿಸಂಭೂತವಾಗ್ಭಿರ್ವಧೂಭಿಃ ।
ಕೃತ್ವಾಽನ್ಯೋಕ್ತೀಶ್ಚ ದಾಸೀರ್ಬುಧಹೃದಯಗೃಹಂ ಪ್ರೌಢವೃತ್ತೀಶ್ಚ ವೃತ್ತೀಃ
ದತ್ವಾಽನ್ಯೋಽನ್ಯಾಭಿಯೋಗಂ ಜಯಮುನಿರಸಕೃದ್ವೀಕ್ಷ್ಯ ರೇಮೇ ಕೃತಾರ್ಥಃ ॥

॥ ಇತಿ ಶ್ರೀವಾದಿರಾಜತೀರ್ಥಶ್ರೀಚರಣಕೃತಶ್ರೀಜಯತೀರ್ಥಪ್ರಶಂಸನಮ್(ತೀರ್ಥಪ್ರಬಂಧ ೩/೧೮) ॥

# ೩. ಶ್ರೀಜಯರಾಜಸ್ತುತಿಃ

ಧಾಟೀ ಶ್ರೀಜಯತೀರ್ಥವರ್ಯವಚಸಾಂ ಚೇಟೀಭವತ್ಸ್ವರ್ಧುನೀ-
ಪಾಟೀರಾನಿಲಪುಲ್ಲಮಲ್ಲಿಸುಮನೋವಾಟೀಲಸದ್ವಾಸನಾ ।
ಪೇಟೀ ಯುಕ್ತಿಮಣಿಶ್ರಿಯಾಂ ಸುಮತಿಭಿಃ ಕೋಟೀರಕೈಃ ಶ್ಲಾಘಿತಾ
ಸಾ ಟೀಕಾ ನಿಚಯಾತ್ಮಿಕಾ ಮಮ ಚಿರಾದಾಟೀಕತಾಂ ಮಾನಸೇ ॥ ೧ ॥

ಟೀಕಾಕೃಜ್ಜಯವರ್ಯ ಸಂಸದಿ ಭವತ್ಯೇಕಾಂತತೋ ರಾಜತಿ
ಪ್ರಾಕಾಮ್ಯಂ ದಧತೇ ಪಲಾಯನವಿಧೌ ಸ್ತೋಕಾನ್ಯಶಂಕಾದ್ವಿಷಃ ।
ಲೋಕಾಂಧೀಕರಣಕ್ಷಮಸ್ಯ ತಮಸಃ ಸಾ ಕಾಲಸೀಮಾ ಯದಾ
ಪಾಕಾರಾತಿದಿಶಿ ಪ್ರರೋಹತಿ ನ ಚೇದ್ರಾಕಾನಿಶಾಕಾಮುಕಃ ॥ ೨ ॥

ಛಾಯಾಸಂಶ್ರಯಣೇನ ಯಚ್ಚರಣಯೋರಾಯಾಮಿಸಾಂಸಾರಿಕಾ-
ಪಾಯಾನಲಪ್ತಮಾತಪವ್ಯತಿಕರಾ ವ್ಯಾಯಾಮವಿಕ್ಷೋಭಿತಾಃ ।
ಆಯಾಂತಿ ಪ್ರಕಟಾಂ ಮುದಂ ಬುಧಜನಾ ಹೇಯಾನಿ ಧಿಕ್ಕೃತ್ಯ ನಃ
ಪಾಯಾಚ್ಛ್ರೀಜಯರಾಟ್ ದೃಶಾ ಸರಸನಿರ್ಮಾಯಾನುಕಂಪಾರ್ದ್ರಯಾ ॥ ೩ ॥

ಶ್ರೀವಾಯ್ವಂಶಸುವಂಶಮೌಕ್ತಿಕಮಣೇಃ ಸೇವಾವಿನಮ್ರಕ್ಷಮಾ-
ದೇವಾಜ್ಞಾನತಮೋವಿಮೋಚನಕಲಾಜೈವಾತೃಕಶ್ರೀನಿಧೇಃ ।
ಶೈವಾದ್ವೈತಮತಾಟವೀಕವಲನಾದಾವಾಗ್ನಿಲೀಲಾಜುಷಃ
ಕೋ ವಾದೀ ಪುರತೋ ಜಯೀಶ್ವರ ಭವೇತ್ ತೇ ವಾದಿಕೋಲಾಹಲೇ ॥ ೪ ॥

ನೀಹಾರಚ್ಛವಿಬಿಂಬನಿರ್ಗತಕರವ್ಯೂಹಾಪ್ಲುತೇಂದೂಪಲಾ-
ನಾಹಾರ್ಯಸ್ರುತಸೂತನಾದ್ಭುತಪರೀವಾಹಾಲಿವಾಣೀಮುಚಃ ।
ಊಹಾಗೋಚರಗರ್ವಪಂಡಿತಪಯೋವಾಹಾನಿಲಶ್ರೀಮುಷೋ
ಮಾಹಾತ್ಮ್ಯಂ ಜಯತೀರ್ಥವರ್ಯ ಭವತೋ ವ್ಯಾಹಾರಮತ್ಯೇತಿ ನಃ ॥ ೫ ॥

